ಮಕ್ಕಳ ವಿಚಾರ ಸಾಹಿತ್ಯ (ವಿಜ್ಞಾನ ವಿಭಾಗ)

ಪ್ರಾಥಮಿಕ ನಾಲ್ಕನೇ ತರಗತಿಯ ಮಕ್ಕಳ ವಯೋಮಿತಿಯನ್ನು ಲಕ್ಷ್ಯದಲ್ಲಿಟ್ಟು ರಚಿಸಿದುದು

# ಜೇನು

ಚನ್ನಪ್ಪ ಎರೇಸೀಮೆ

ಡೈರೆಕ್ಟರ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್ ಬೆಂಗಳೂರು ಅವರ ಆರ್ಡರ್ ನಂ. C.L· 4–15/64–65 Dated 3–12–1964ರ ಪ್ರಕಾರ ಪ್ರೈಮರಿ, ಸೀನಿಯರ್ ಪ್ರೈಮರಿ ಶಾಲೆಗಳಿಗೆ ಜಿಲ್ಲಾ ವಿದ್ಯಾಧಿಕಾರಿಗಳು, ಜಿಲ್ಲಾ ಸ್ಕೂಲ್ ಬೋರ್ಡ್ A.O. ಅವರೂ, ಮುನಸಿಪಲ್ ಸ್ಕೂಲ್ ಬೋರ್ಡ್ A. O. ಅವರು ಕೊಂಡು ಸಪ್ಲೈ ಮಾಡಲು ಆರ್ಡರ್ ಆಗಿದೆ.

ಮೈಸೂರು ವಿದ್ಯಾ ಇಲಾಖೆಯಿಂದ ಪ್ರಥಮ ಬಹುಮಾನ ಪಡೆದ ಪುಸ್ತಕ

ಚತುರ್ಥ ಮುದ್ರಣ – ೧೯೮೮



**ಬೆಲೆ : 6 ರೂಪಾಯಿ**

ಪುಸ್ತಕ ದೊರೆಯುವ ಸ್ಥಳ :

**ಪಂಡಿತ ಚನ್ನಪ್ಪ ಎರೇಸೀಮೆ**

ನಂ. 597. 7ನೇ ಮುಖ್ಯರಸ್ತೆ, 2ನೇ ಅಡ್ಡರಸ್ತೆ
ವಿಜಯನಗರ, ಬೆಂಗಳೂರು–560 040

## ಸರ್ಟಿಫಿಕೇಟ್

This is to certify that "JENU" written by Shri C. M. Yeresime, Teacher, Government Boys High School Chitradurga has been scrutinised and necessary corrections have been effected. This book I feel, gives a very interesting subject matter for the agegroup it is meant and Shri Yeresime deserves all encouragement for the pains he has taken in preparing the Book.

(Sd.) **B. G. GUPTA**
Apiarist, Dept. of Agriculture
Bangalore

Bangalore
20-2-1963

## ಅಭಿಪ್ರಾಯ

ಶ್ರೀ ಚನ್ನಪ್ಪ ಎರೇಸೀಮೆ ಅವರ "ಜೇನು" ಪುಸ್ತಕವನ್ನು ಓದಿ ನೋಡಿ ಸಂತೋಷ ಪಟ್ಟಿದ್ದೇನೆ. ಮಕ್ಕಳ ಸಾಹಿತ್ಯಕ್ಕಾಗಿ ಶ್ರೀಯುತರು ವಿಶೇಷವಾಗಿ ಶ್ರಮಿಸಿದ್ದಾರೆ. ಶಿಕ್ಷಣ ತಜ್ಞರೂ, ವಿದ್ವಾಂಸರೂ, ಒಳ್ಳೆಯ ವಾಗ್ಮಿಗಳೂ ಆದ ಶ್ರೀ ಎರೇಸೀಮೆ ಅವರು ಮಕ್ಕಳ ಮನಸ್ಸು, ಅಭಿರುಚಿಗಳನ್ನರಿತು. ಅವುಗಳಿಗೆ ಅನುಗುಣವಾಗಿ ಬರೆಯಬಲ್ಲ ದಕ್ಷ ಲೇಖಕರಲ್ಲಿ ಒಬ್ಬರಾಗಿದ್ದಾರೆ. ಜೇನು ಪುಸ್ತಕದ ಭಾಷೆ, ನಿರೂಪಣೆ, ಭಾವಾಭಿವ್ಯಕ್ತಿಗಳೆಲ್ಲವೂ ತೃಪ್ತಿಕರವಾಗಿವೆ.

ಅ. ನ. ಕೃಷ್ಣರಾಯ

ಅನ್ನಪೂರ್ಣಾ
ವಿಶ್ವೇಶ್ವರಪುರಂ,
ಬೆಂಗಳೂರು-೪
೧೨-೧-೬೩

# ನಿವೇದನೆ

ಜೇನಿನ ವಿಚಾರವಾಗಿ ಬಹು ಸಂಯಮದಿಂದ ಹಲವಾರು ವಿಚಾರಗಳನ್ನು ಚಿಕ್ಕಮಕ್ಕಳ ಮುಂದೆ ಸಂಗ್ರಹಿಸಿ ಇಡುವುದಕ್ಕೆ ಪ್ರಯತ್ನಿಸಿದ ನನ್ನ ಪ್ರಯತ್ನ ಎಷ್ಟರಮಟ್ಟಿಗೆ ಯಶಸ್ವಿಯಾಗಿಯೋ ಇದನ್ನು ಓದಿದ ಮಕ್ಕಳೇ ಉತ್ತರಿಸಬೇಕು. ಅಲ್ಲದೆ ಹೊಸದಾಗಿ ಅಕ್ಷರಾಭ್ಯಾಸ ಮಾಡಿದ ಪ್ರೌಢರೂ ಈ ಗ್ರಂಥದ ಲಾಭ ಮಾಡಿಕೊಂಡಾರೆಂಬ ಆಸೆ ನನಗಿದೆ. ಈ ಪುಟ್ಟ ಪುಸ್ತಕಕ್ಕೆ ಮೈಸೂರು ವಿದ್ಯಾ ಇಲಾಖೆಯವರು ಪ್ರಥಮ ಬಹುಮಾನವಿತ್ತು ಗೌರವಿಸಿದುದಕ್ಕಾಗಿ ಇಲಾಖೆಗೆ ಕೃತಜ್ಞತೆಯನ್ನು ಸಲ್ಲಿಸದಿರಲಾರೆ.

ಈ ಗ್ರಂಥಕ್ಕೆ ರೇಖಾಚಿತ್ರಗಳನ್ನು ಬರೆದುಕೊಟ್ಟ ವರ್ಧಿಷ್ಣು ಕಲಾವಂತ ಶ್ರೀಮಾನ್ ಜಿ. ಕೆ. ಸತ್ಯ ಅವರಿಗೂ ಈ ಗ್ರಂಥದ ಕೈಬರಹದ ಪ್ರತಿಯನ್ನು ಓದಿ ಯೋಗ್ಯ ಸಲಹೆಗಳೊಂದಿಗೆ ಒಂದೆರಡು ಒಳ್ಳೆಯ ನುಡಿಗಳನ್ನು ಹೇಳಿದ ಮೈಸೂರು ರಾಜ್ಯದ ಅಗ್ರಿಕಲ್ಚರಲ್ ಡಿಪಾರ್ಟ್‌ಮೆಂಟಿನ "ಎಪಿಯರಿಸ್ಟ್" ರವರಾದ ಶ್ರೀಮಾನ್ ಬಿ. ಜಿ. ಗುಪ್ತ ಸಾಹೇಬರಿಗೂ, ಗ್ರಂಥವನ್ನು ತಾಳ್ಮೆಯಿಂದ ಪೂರ್ಣ ಓದಿ ಮೆಚ್ಚುಗೆಯನ್ನು ವ್ಯಕ್ತಪಡಿಸಿದ ಕನ್ನಡನಾಡಿನ ಸುಪ್ರಸಿದ್ಧ ಸಾಹಿತಿಗಳಾದ ಶ್ರೀ ಅ. ನ. ಕೃಷ್ಣರಾಯರಿಗೂ, ಸಕಾಲದಲ್ಲಿ ಅಚ್ಚುಕಟ್ಟಾಗಿ ಮುದ್ರಣ ಮಾಡಿಕೊಟ್ಟ ಅನುಭವ ಪ್ರಿಂಟರ್ಸ್ ಮಾಲಿಕರಿಗೂ ನನ್ನ ಕೃತಜ್ಞತೆಗಳು.

ಬೆಂಗಳೂರು
1-3-1963

ಗ್ರಂಥಕರ್ತ

# ಜೇನು



ಅಣ್ಣ, ಜೇನು ಎಂದರೆ ಇದೆಯೆ ?
ಅಬ್ಬಾ ! ಏನು ಸಂಘಜೀವನ !

ಅಂದು ಭಾನುವಾರ. ಶಂಕರ ಅಣ್ಣನೊಡನೆ ಹೊಲಕ್ಕೆ ಹೋಗಿದ್ದನು. ಹಲವು ಬಗೆಯ ಹೂಗಳು ಹೊಲದಲ್ಲಿ

ಅರಳಿದ್ದವು. ಬೆಳೆಗಳು ಬೆಳೆ ಬೆಳೆದು ನಿಂತಿದ್ದವು. ತಮ್ಮ ಎಲ್ಲ ಹೊಲಗಳನ್ನೂ ಅಣ್ಣ ತಮ್ಮರಿಬ್ಬರೂ ನೋಡಿಕೊಂಡು ಮನೆಯ ಕಡೆ ಹೊರಟರು.

ಶಂಕರನಿಗೆ ಅಂದು ಎಂದೂ ಇಲ್ಲದ ಆನಂದ. ಎಲ್ಲೆಲ್ಲೂ ಹಚ್ಚ ಹಸಿರು ಪೈರು ; ಬಗೆಬಗೆಯ ಬಣ್ಣದ ಹೂಗಳು ; ಹೂಗಳ ಸುತ್ತ ಮುತ್ತ ಝೇಂಕಾರ ಮಾಡುವ ದುಂಬಿಗಳು ಇವನ್ನೆಲ್ಲ ನೋಡುತ್ತ ನೋಡುತ್ತ ಶಂಕರ ಮೈಮರೆತಿದ್ದನು. ನೀರಡಿಕೆಯೂ ಆಗಿತ್ತು. ಹಳ್ಳದಲ್ಲಿ ನೀರು ಕುಡಿದರು. ಪಕ್ಕದಲ್ಲಿರುವ ದೊಡ್ಡ ಮರದ ಕೆಳಭಾಗದಲ್ಲಿ ಹುಲ್ಲಿನ ಹಾಸಿಗೆಯ ಮೇಲೆ ಕುಳಿತು ಕೊಂಡರು. ಅಲ್ಲಿಯೇ ಇನ್ನೊಂದು ಮರದಮೇಲೆ ಸಾವಿರಾರು ಹುಳುಗಳು ಗುಂಪುಗುಂಪಾಗಿ ಕುಳಿತಿರುವುದನ್ನು ಶಂಕರ ನೋಡಿ ದನು. ಇಷ್ಟೊಂದು ಹುಳುಗಳ ದೊಡ್ಡ ಗುಂಪನ್ನು ಶಂಕರ ಎಂದೂ ನೋಡಿದ್ದಿಲ್ಲ. ಅಣ್ಣನನ್ನು ಕುರಿತು "ಅಣ್ಣ, ಮರದ ಮೇಲಿರುವ ಹುಳುಗಳ ಆ ಗುಂಪು ಏನು ?" ಎಂದನು.

ಅಣ್ಣ– ಶಂಕರ, ಹುಳುಗಳ ಇಂಥ ಗುಂಪನ್ನು ನೀನು ಇದುವರೆಗೆ ನೋಡಿರಲಿಲ್ಲವೇ ?

ಶಂಕರ– ಇಲ್ಲ.

ಅಣ್ಣ– ಈ ಹುಳುಗಳ ಗುಂಪನ್ನು ನೋಡಿದಿದ್ದರೂ ಇವುಗಳ ಉಪಯೋಗವನ್ನು ಚಿಕ್ಕ ಮಗುವಾಗಿದ್ದಾಗಿನಿಂದಲೂ ನೀನು ಪಡೆದಿದ್ದೀಯೆ.

ಶಂಕರ– ಹಾಗೆಂದರೆ ?

ಅಣ್ಣ– ಇವುಗಳ ತುಪ್ಪವನ್ನು ಚಿಕ್ಕ ಮಗುವಿನಿಂದ ಇದುವರೆಗೂ ನೀನು ಕುಡಿಯುತ್ತಲೇ ಇದ್ದೀಯೆ. ನಾಲಗೆ ಚಪ್ಪರಿಸಿ ದೀಯೆ.

ಶಂಕರ– ತುಪ್ಪ ! ಎಂಥ ತುಪ್ಪ ಅಣ್ಣ!! ಈ ಹುಳುಗಳ ತುಪ್ಪ ತಿನ್ನುತ್ತಾರೆಯೆ ?

ಅಣ್ಣ– ಹೌದು. ನೀನು ಜೇನುತುಪ್ಪ ತಿಂದಿಲ್ಲವೆ ?

ಶಂಕರ– ಎಷ್ಟೋ ಸಲ ತಿಂದಿದ್ದೇನೆ.

ಅಣ್ಣ– ಈ ಜಾತಿಯ ಹುಳುಗಳೇ ಜೇನುತುಪ್ಪ ಕೊಡುತ್ತವೆ. ಇವಕ್ಕೆ "ಜೇನು" ಎನ್ನುತ್ತಾರೆ.

ಶಂಕರ– ಜೇನು ಎಂದರೆ ಇದೆಯೆ ?

ಅಣ್ಣ– ಹೌದು. ಇದಕ್ಕೇ ಜೇನು ಎನ್ನುತ್ತಾರೆ.

ಶಂಕರ– ಅಬ್ಬಾ ! ಏನು ಸಹಕಾರ ಜೀವನ ! ಏನು ಸಂಘಜೀವನ! ಸಾವಿರಾರು ಹುಳುಗಳು ಎಷ್ಟು ಅಚ್ಚುಕಟ್ಟಾಗಿ ಕೂಡಿ ಕುಳಿತಿವೆ. ಎಷ್ಟು ಹೊಂದಿಕೆಯಿಂದ ನಡೆದುಕೊಳ್ಳುತ್ತಿವೆ. ಇವುಗಳ ಸಹಕಾರ ಜೀವನಕ್ಕೆ ನಾನು ಬಹಳ ಸಂತೋಷ ಪಡುತ್ತೇನೆ. ಅಣ್ಣ, ಜೇನು ತುಪ್ಪವನ್ನು ಹಲವಾರು ಸಲ ತಿಂದಿದ್ದೇನೆ. ಇಂಥ ಹುಳುಗಳೇ ತಯಾರಿಸುತ್ತವೆಂಬುದು ತಿಳಿದಿರಲಿಲ್ಲ. ಒಂದು ಆಶ್ಚರ್ಯದ ಸಂಗತಿಯೇನೆಂದರೆ ಜೇನುತುಪ್ಪ ಬಹು ಸಿಹಿ, ಅಂಥ ಸಿಹಿ ವಸ್ತುವನ್ನು ಇವು ಹೇಗೆ ಕೂಡಿಡುತ್ತವೆ ? ಇದು ನನಗೆ ಆಶ್ಚರ್ಯಗೊಳಿಸಿದೆ. ಇವು ಯಾವಾಗಲೂ ಮರದ ಮೇಲೆಯೇ ವಾಸಮಾಡುತ್ತ ವೆಯೆ ? ಇವೆಲ್ಲ ವಿಷಯಗಳನ್ನು ನನಗೆ ತಿಳಿಸಬೇಕು.

ಎಂದು ಶಂಕರ ಅಣ್ಣನನ್ನು ಕೇಳಿ ಜೇನನ್ನೇ ನೆಟ್ಟ ದೃಷ್ಟಿ ಯಿಂದ ನೋಡುತ್ತ ಕುಳಿತನು. ಕೆಲವು ಹುಳುಗಳು ಗೂಡಿನಿಂದ ಹೊರಗೆ ಹಾರಿ, ಹೋಗುವುದನ್ನು, ಕೆಲವು ಹುಳುಗಳು ಹೊರಗಿ ನಿಂದ ಗೂಡಿಗೆ ಬಂದು ಸೇರಿಕೊಳ್ಳುವುದನ್ನು ಗಮನಿಸುತ್ತಿದ್ದನು. ಅಣ್ಣನು ಶಂಕರನು ನೆಟ್ಟದೃಷ್ಟಿಯಿಂದ ಜೇನು ಗೂಡು ನೋಡುತ್ತಿ ರುವುದನ್ನೂ, ಆಶ್ಚರ್ಯದಿಂದ ಜೇನಿನ ವಿಷಯ ಕೇಳಿದುದನ್ನೂ

ತಿಳಿದು ಸಂತೋಷಗೊಂಡನು, ಶಂಕರನಿಗೆ ಇದರ ಸಂಬಂಧದ ವಿಷಯವನ್ನೆಲ್ಲ ತಿಳಿಸಬೇಕೆಂದುಕೊಂಡನು.

೨

ಅಣ್ಣ- ಶಂಕರ, ಜೇನು ಮರದಲ್ಲಿ ಅಷ್ಟೇ ಅಲ್ಲ; ಸೇತುವೆ, ದೊಡ್ಡ ದೊಡ್ಡ ಕಲ್ಲುಬಂಡೆ, ಹುತ್ತ, ಪೊದೆ, ಮನೆಗಳು, ನೆಲದ ಬಿರುಕು, ಗೋಡೆಗಳ ಬಿರುಕು, ಅಡಿಕೆ, ತೆಂಗಿನಮರ ಎಲ್ಲೆಲ್ಲಿ ತಮಗೆ ಗೂಡುಕಟ್ಟಲು ಅನುಕೂಲವಿದೆಯೋ ಅಲ್ಲೆಲ್ಲ ವಾಸಿಸುತ್ತವೆ. ಅಡವಿಯಲ್ಲಿನ ದೊಡ್ಡ ದೊಡ್ಡ ಆಲದಮರ, ಮಾವಿನಮರಗಳಲ್ಲಿ ಯಾವಾಗಲೂ ವಾಸ ಮಾಡುತ್ತವೆ. ಎಲ್ಲೂ ಹಾರಿ ಹೋಗುವುದಿಲ್ಲ.

ಶಂಕರ- ಇಲ್ಲೆಲ್ಲ ವಾಸಮಾಡಿ ತುಪ್ಪ ಕೊಡುತ್ತವೆಯೆ ?

ಅಣ್ಣ- ಹೌದು ಇಂಥ ಸ್ಥಳಗಳಲ್ಲೆಲ್ಲ ವಾಸಮಾಡಿ ತುಪ್ಪವನ್ನು ಕೂಡಿಟ್ಟುಕೊಡುತ್ತವೆ.

ಶಂಕರ- ಇದೇ ನನಗೊಂದು ಸಮಸ್ಯೆ.

ಅಣ್ಣ- ಏನು ಆ ಸಮಸ್ಯೆ ?

ಶಂಕರ- ಅಣ್ಣ, ಹರಳೆಣ್ಣೆಯಂತೆ ಮಂದವಾದ ತುಪ್ಪವನ್ನು ಗೂಡಿನಲ್ಲಿ ಹೇಗೆ ಸಂಗ್ರಹಿಸಿಡುತ್ತವೆ ? ಎಂಬ ಸಮಸ್ಯೆ. ಸೀಸೆಯಲ್ಲಿ ತುಂಬಿಡಲು ಸಾಧ್ಯವೇ ಅವು ? ಸೋರದಂತೆ ಹೇಗೆ ಸಂಗ್ರಹಿಸುತ್ತವೆ ?

ಅಣ್ಣ- ತುಪ್ಪವನ್ನು ತುಂಬಿಡಲು ಅವಕ್ಕೆ ಸೀಸೆಯಿಲ್ಲ; ಪಾತ್ರೆಯಿಲ್ಲ; ಏನೂಇಲ್ಲ. ಅವು ತಮ್ಮವೇ ಆದ ಚಿಕ್ಕ ಚಿಕ್ಕ ಮೇಣದ ಸೀಸೆಗಳಲ್ಲಿ ಸೋರದ ಹಾಗೆ ತುಂಬಿಡುತ್ತವೆ. ದೇವರು ಅವಕ್ಕೆ ಅಂಥ ಶಕ್ತಿ ಕೊಟ್ಟಿದ್ದಾನೆ. ಈ ಜಗತ್ತಿನಲ್ಲಿ ಅದೆಷ್ಟೋ ಬಗೆಯ ಪ್ರಾಣಿಗಳು, ಪಕ್ಷಿಗಳು, ಪಶುಗಳು, ಗೊದ್ದ,

ಇರುವೆ, ಗೆದ್ದಿಲುಗಳಂಥ ಸಣ್ಣ ಸಣ್ಣ ಜೀವಿಗಳು ಗುಂಪು ಗುಂಪಾಗಿ ಕೂಡಿ ಬಾಳುವುದನ್ನು ನೀನು ನೋಡಿದ್ದೀಯೆ. ಈ ಎಲ್ಲ ಬಗೆಯ ಜೀವಿಗಳಿಗೂ ದೇವರು ಒಂದೊಂದು ತರದ ಬುದ್ಧಿ ಶಕ್ತಿಯನ್ನು ಕೊಟ್ಟಿದ್ದಾನೆ. ದೇವರು ತಮಗೆ ಕೊಟ್ಟ ಬುದ್ಧಿಶಕ್ತಿಗನುಸರಿಸಿ ಜೀವಿಸುತ್ತವೆ. ದುಡಿಯುತ್ತವೆ. ಆಹಾರ ಸಂಗ್ರಹಿಸುತ್ತವೆ. ಕೂಡಿಟ್ಟ ಆಹಾರ ತಿನ್ನುತ್ತವೆ. ಮಕ್ಕಳು ಮರಿಗಳನ್ನು ಜೋಪಾನ ಮಾಡುತ್ತವೆ. ಕೊನೆಗೆ ಸಾಯುತ್ತವೆ. ಮನುಷ್ಯನೂ ಅಷ್ಟೆ. ಈ ಜಗತ್ತಿನ ನಿಯಮವೇ ಬಹಳ ಅದ್ಭುತವಾದದ್ದು. ಆಶ್ಚರ್ಯವಾದದ್ದು. ಯಾವುದೊ ಮಹಾಶಕ್ತಿಯಿಂದ ಈ ಕಾರ್ಯ ನಡೆಯುತ್ತದೆ.

ಶಂಕರ- ಅಂಥ, ಅದ್ಭುತವಾದ ಆಶ್ಚರ್ಯದ ಮಹಾಶಕ್ತಿ ಯಾವುದಣ್ಣ ?

ಅಣ್ಣ- ಆ ಶಕ್ತಿಯನ್ನೇ ನಾವು ದೇವರು ಎಂದು ಕರೆಯುವುದು. ಶಂಕರ, ದೇವಶಕ್ತಿ ಅದ್ಭುತ, ಆಶ್ಚರ್ಯ. ಜೇನುಹುಳುಗಳಿಗೆ ದೇವರು ಅಂಥ ಶಕ್ತಿ ಕೊಟ್ಟಿದ್ದಾನೆ. ಆ ಶಕ್ತಿಯಿಂದಲೇ ಅವು ಮೇಣದಿಂದ ಚಿಕ್ಕ ಚಿಕ್ಕ ಗೂಡು ಕಟ್ಟುತ್ತವೆ. ಗೂಡಿನಲ್ಲಿ ತುಪ್ಪವನ್ನು ಸೋರದಂತೆ ಕೂಡಿಡುತ್ತವೆ. ಹೂವಿನ ಧೂಳನ್ನು ಬಳಿದುಕೊಂಡು ಬಂದು ಚಿಕ್ಕ ಚಿಕ್ಕ ಗೂಡುಗಳಲ್ಲಿ ಕೂಡಿಡುತ್ತವೆ. ಚಿಕ್ಕ ಚಿಕ್ಕ ಗೂಡುಗಳಲ್ಲಿ ಮೊಟ್ಟೆಯಿಡುತ್ತವೆ. ಮರಿಗಳನ್ನು ಜೋಕೆಮಾಡುತ್ತವೆ. ಅವುಗಳನ್ನು ಬೆಳೆಸಿ ದೊಡ್ಡವನ್ನಾಗಿ ಮಾಡುತ್ತವೆ. ಕೊನೆಗೆ ತಾವು ಸಾಯುತ್ತವೆ.

ಶಂಕರ- ಅಣ್ಣ, ದೇವರ ಸೃಷ್ಟಿ ನೀನು ಹೇಳಿದಂತೆ ಬಹಳ ಅದ್ಭುತ ವಾದದ್ದೇ ಸರಿ. ಈಗ ನನಗೆ ಈ ಹುಳುಗಳು ತುಪ್ಪವನ್ನು ಹೇಗೆ ಮಾಡುತ್ತವೆ; ಏಕೆ ಮಾಡುತ್ತವೆ; ಮರಿಗಳು ಹೇಗೆ ಬೆಳೆಯುತ್ತವೆ; ಮೇಣದ ಗೂಡನ್ನು ಹೇಗೆ ಕಟ್ಟುತ್ತವೆ; ಹೂವಿನ ಪರಾಗವನ್ನು ಹೇಗೆ ಬಳಿದುಕೊಂಡು ಬರುತ್ತವೆ ಈ ಎಲ್ಲ ವಿಷಯಗಳನ್ನು ಒಂದೊಂದಾಗಿ ಹೇಳು? ಕೇಳಲಿಕ್ಕೆ ಇದು ಬಲು ಸ್ವಾರಸ್ಯವಿಚಾರ.

ಅಣ್ಣ– ಸ್ವಾರಸ್ಯ ವಿಚಾರವಲ್ಲವೆ ! ಜೇನು ಹುಳುಗಳ ಜೀವನ ವಿಚಾರ ಕೇಳುವುದಕ್ಕೆ ಎಲ್ಲರಿಗೂ ಸ್ವಾರಸ್ಯ; ತಿನ್ನುವುದಕ್ಕೆ ತುಪ್ಪ ಇನ್ನೂ ಸ್ವಾರಸ್ಯ. ಶಂಕರ, ಜೇನುಹುಳು ತುಪ್ಪ ವನ್ನು ಹೇಗೆ ಮಾಡುತ್ತವೆಂಬುದನ್ನು ಮೊದಲು ಕೇಳು. ಅನಂತರ ಉಳಿದ ವಿಚಾರ ತಿಳಿಸುತ್ತೇನೆ.

ಶಂಕರ- ನನಗೆ ಒಂದೊಂದಾಗಿ ಎಲ್ಲ ವಿಚಾರಗಳನ್ನು ತಿಳಿಸು.

ಅಣ್ಣ- ನೀನು ನಮ್ಮ ಹೊಲದಲ್ಲಿ ಹುಚ್ಚೆಳ್ಳು ಹೂವು, ತೊಗರಿಯ ಹೂವು, ಅವರೆ ಹೂವುಗಳೇ ಮೊದಲಾದ ಹಲವಾರು ಜಾತಿ ಹೂವುಗಳನ್ನು ನೋಡಿದೆಯಲ್ಲವೆ ?

ಶಂಕರ- ಎಲ್ಲ ಹೂವುಗಳನ್ನೂ ನೋಡಿದೆ. ಇವೂ ಅಲ್ಲದೆ ದೊಡ್ಡ ದೊಡ್ಡ ಸೂರ್ಯಕಾಂತಿಯ ಹೂವುಗಳನ್ನೂ ನೋಡಿದೆ.

ಅಣ್ಣ- ಹೂವುಗಳನ್ನು ನೋಡಿ ಸಂತೋಷಪಟ್ಟೆ ಅಷ್ಟೆ !

ಶಂಕರ- ಹೂವುಗಳನ್ನು ನೋಡಿ ಯಾರು ಸಂತೋಷಪಡುವು ದಿಲ್ಲಣ್ಣ ! ಜೇನು ಹುಳುಗಳು ತುಪ್ಪ ಹೇಗೆ ಮಾಡುತ್ತ ವೆಂದು ಹೇಳಹತ್ತಿದ್ದ ನೀನು ಏನೇನೋ ಹೇಳುತ್ತೀಯಲ್ಲ ಅಣ್ಣಯ್ಯ !

ಅಣ್ಣ- ತಮ್ಮ, ಜೇನುಹುಳು, ಹೂವು ಇವೆರಡರಿಂದಲೇ ಜೇನು ತುಪ್ಪವಾಗುವುದು. ಅದಕ್ಕಾಗಿಯೆ ಹೂವಿನ ವಿಚಾರವಾಗಿ

ನಿನ್ನನ್ನು ಕೇಳಿದ್ದು. ಹೂವುಗಳನ್ನು ನೋಡಿ ಸಂತೋಷ ಪಟ್ಟೆ. ಆದರೆ ಹೂಗಳ ಮೇಲೆ ಗಳಿಗೆ ಗಳಿಗೆಗೆ ಹಲವಾರು ದುಂಬಿಗಳು ಬಂದು ಕುಳಿತು ಝೇಂಕಾರ ಮಾಡುತ್ತ ಸಂತೋಷದಿಂದ ನಲಿದಾಡುತ್ತಿರುವುದನ್ನು ನೀನು ಗಮನಿಸಿ ದಂತೆ ತೋರಲಿಲ್ಲ. ಅದಕ್ಕಾಗಿ ಹೀಗೆ ಕೇಳಿದೆ.

ಶಂಕರ- ಹೂವಿನ ಮೇಲೆ ದುಂಬಿಗಳು ಬಂದು ಬಂದು ಕುಳಿತು ಹಾರಿ ಹಾರಿ ಹೋಗುವುದನ್ನು ನೋಡಿದೆ; ಅವು ಹಾಗೆ ಬಂದು ಕುಳಿತು ಹಾರಿ ಹೋದರೆ ಜೇನುತುಪ್ಪ ಏಕಾಗಬೇಕು? ಮತ್ತು ಹೇಗೆ ಆಗಬೇಕು?




ಕುಡಿದ ಮಕರಂದ ಹೊಟ್ಟೆಯಲ್ಲಿ ಜೇನುತುಪ್ಪವಾಗುವುದು

ಅಣ್ಣ- ಶಂಕರ, ಆ ದುಂಬಿಗಳೇ ಜೇನು ಹುಳುಗಳು. ಅವು ಹೂವುಗಳ ಮೇಲೆ ಕುಳಿತು ಹೂವಿನಲ್ಲಿರುವ ಮಕರಂದ ವನ್ನು, ಕೊಳವೆಯಂತಿರುವ ಮೂತಿಯ ತುದಿಯಿಂದ ಹೀರುವುವು. ಅವುಗಳ ಹೊಟ್ಟೆಯಲ್ಲಿ ಹೂವಿನ ಮಕರಂದ ವನ್ನು ಸಂಗ್ರಹಿಸಿಡುವ ಚೀಲವೊಂದಿದೆ. ಆ ಚೀಲದಲ್ಲಿ,

ಕುಡಿದ ಮಕರಂದವನ್ನು ಸಂಗ್ರಹಿಸುವುವು. ಅನಂತರ ಹೂವಿನಲ್ಲಿರುವ ಪರಾಗವೆಂಬ ಹೆಸರಿನ ಧೂಳನ್ನು ಸಂಗ್ರಹಿಸುವುವು.

ಶಂಕರ- ಪರಾಗವೆಂಬ ಹೆಸರಿನ ಧೂಳನ್ನು ಹೇಗೆ ಸಂಗ್ರಹಿಸುವುವು!

ಅಣ್ಣ- ಜೇನು ದುಂಬಿಗೆ ಆರು ಕಾಲುಂಟು ಅವುಗಳಲ್ಲಿ ಮಧ್ಯದ ಕಾಲುಗಳಿಂದ ಹೂವಿನ ಪರಾಗವನ್ನು ಬಳಿದು ಹಿಂಗಾಲ ಮೇಲೆ ಉಂಡೆಯಂತೆ ಮೆತ್ತಿಕೊಂಡು ಗೂಡಿಗೆ ಹಾರಿ ಬರುವುವು.

ಶಂಕರ- ಗೂಡಿಗೆ ಬಂದಮೇಲೆ ?

ಅಣ್ಣ- ಕುಡಿದು ತಂದ ಮಕರಂದವು ಅವುಗಳ ಹೊಟ್ಟೆಯಲ್ಲಿಯೇ ಪಕ್ವವಾದ ಜೇನುತುಪ್ಪವಾಗಿಬಿಟ್ಟಿರುತ್ತದೆ. ಅದನ್ನು ಗೂಡಿನ ಮೇಲ್ಭಾಗದ ಚಿಕ್ಕ ಚಿಕ್ಕ ಮೇಣದ ಚೀಲಗಳಲ್ಲಿ ಕಾರಿಕೊಳ್ಳುವುವು. ಚಿಕ್ಕ ಚಿಕ್ಕ ಆ ಗೂಡು ತುಂಬಿದಂತೆಲ್ಲ ಅವುಗಳ ಮೇಲೆ ಮೇಣದ ತೆಳ್ಳನೆಯ ಪೊರೆಯನ್ನು ಮಾಡಿ ಮುಚ್ಚಿಬಿಡುವುವು.

ಶಂಕರ- ಅಮ್ಮ ಮನೆಯಲ್ಲಿ ಬೆಲ್ಲದ ಗಡಿಗೆಗೆ ಮೆತ್ತುಹಾಕುವ ಹಾಗೆಯೆ ?

ಅಣ್ಣ- ಹೌದು. ಬೆಲ್ಲದ ಗಡಿಗೆಗೆ ಅಮ್ಮ ಮೆತ್ತುಹಾಕುವಂತೆ. ಅಥವಾ ವ್ಯವಸಾಯಗಾರರು ಪಣತಗಳಲ್ಲಿ ಬತ್ತ ತುಂಬಿ ಮೇಲೆ ಬಾಯಿ ಮೆತ್ತುಹಾಕುವಹಾಗೆ. ಅನಂತರ ಹಿಂಗಾಲ ಮೇಲೆ ಮುದ್ದೆ ಮುದ್ದೆಯಾಗಿ ಅಂಟಿಸಿಕೊಂಡು ಬಂದ ಪರಾಗವನ್ನು ತುಪ್ಪ ತುಂಬಿದ ಗೂಡುಗಳ ಕೆಳಭಾಗದ ಗೂಡುಗಳಲ್ಲಿ ತುಂಬಿಬಿಡುವುವು. ಇವಕ್ಕೆ ಮೆತ್ತನ್ನು ಹಾಕುವುದಿಲ್ಲ.

ಅಣ್ಣ- ಪುಷ್ಪಧೂಳಿಯನ್ನು ತುಂಬಿದ ಗೂಡುಗಳಿಗೆ ಮೆತ್ತನ್ನು ಏಕೆ ಹಾಕುವುದಿಲ್ಲ ?

ಶಂಕರ- ಪುಷ್ಪಧೂಳು ಗಟ್ಟಿಯಾಗಿರುತ್ತದೆ, ಆದ್ದರಿಂದ ಅದು ಸೋರುವುದಿಲ್ಲ, ಕಾರಣ ಮೆತ್ತುಹಾಕುವುದಿಲ್ಲ.

ಶಂಕರ- ಹಾಗಾದರೆ ಜೇನುಗೂಡಿನ ಮೇಲ್ಭಾಗದಲ್ಲಿ ತುಪ್ಪವನ್ನೂ ಕೆಳಭಾಗದಲ್ಲಿ ಪುಷ್ಪಧೂಳು ಅಥವಾ ಪರಾಗವನ್ನೂ ತುಂಬಿ ಇಡುತ್ತವೆಂದ ಹಾಗಾಯಿತು.



ಮುಂಗಾಲುಗಳಿಂದ ಪರಾಗವನ್ನು ಕೆರೆದು ಹಿಂಗಾಲ ಮೇಲೆ ಸಂಗ್ರಹಿಸಿದೆ.



ಪರಾಗವನ್ನು ಸಂಗ್ರಹಿಸುವ ಹಿಂಗಾಲ ಭಾಗವನ್ನು ಗಮನಿಸಿ.



ಪರಾಗವನ್ನು ಬಳಿದು ಸಂಗ್ರಹಿಸಿದ ಹಿಂಗಾಲನ್ನು ನೋಡು.

೩

ಶಂಕರನಿಗೆ ಜೇನು ಹುಳುಗಳ ಜೀವನದ ವಿಚಾರ ಸ್ವಾರಸ್ಯವಾಗಿ ತೋರಿತು. ಅಣ್ಣ ಹೇಳುವುದನ್ನು ಗಮನವಿಟ್ಟು ಕೇಳುತ್ತಿದ್ದನು. ಅಲ್ಲದೆ ಮುಖ್ಯ ಮುಖ್ಯ ವಿಚಾರಗಳನ್ನು ಚಿಕ್ಕ ಪುಸ್ತಕವೊಂದರಲ್ಲಿ ಬರೆದುಕೊಳ್ಳುತ್ತಿದ್ದನು. ಪುನಃ ಅಣ್ಣನನ್ನು ಕುರಿತು "ಅಣ್ಣ, ತುಪ್ಪದಂತೆ ಪರಾಗವನ್ನೂ ತಿನ್ನಬಹುದೆ ?".

ಅಣ್ಣ– ಪರಾಗವೂ ಬಹು ರುಚಿಯಾದ ಪದಾರ್ಥ. ಅದನ್ನು ತಿನ್ನಬಹುದು. ಹೋಳಿಗೆಗಾಗಿ ಮಾಡಿದ ಹೂರಣ ತಿಂದ ಹಾಗಿರುತ್ತದೆ. ಜೇನು ಹುಳುಗಳು ತಮ್ಮ ಚಿಕ್ಕ ಮರಿಗಳಿಗೆ ಆಹಾರ ಕೊಡುವಾಗ ಸ್ವಲ್ಪ ತುಪ್ಪ ಸ್ವಲ್ಪ ಪರಾಗ ಎರಡನ್ನೂ ಕಲಸಿ ತಿನ್ನಿಸುವುವು. ಚಿಕ್ಕ ಮರಿಗಳಿಗೆ ಬರಿಯ ತುಪ್ಪವನ್ನೂ ತಿನ್ನಿಸಕೂಡದು. ಬರಿಯ ಪರಾಗವನ್ನೂ ತಿನ್ನಿಸಕೂಡದು. ಹೀಗೆ ಅವು ತಮಗಾಗಿ ತಮ್ಮ ಮರಿಗಳಿ

ಗಾಗಿ ಕೂಡಿಟ್ಟ ತುಪ್ಪವನ್ನು ಜನರು ಬಳಿದುಕೊಂಡು ಬಂದು ತಿನ್ನುತ್ತಾರೆ.

ಶಂಕರ– ಜೇನು ದುಂಬಿಗಳು ತಮಗಾಗಿ ಮತ್ತು ತಮ್ಮ ಮರಿಗಳಿಗಾಗಿ ತುಪ್ಪ ಕೂಡಿಡುತ್ತವೆಯೇ ?

ಅಣ್ಣ– ಹೌದು. ತಮಗೂ ಅದೇ ಆಹಾರ. ಮರಿಗಳಿಗೂ ಅದೇ ಆಹಾರ. ಹೂವುಗಳು ಹೆಚ್ಚಾಗಿರುವ ಕಾಲದಲ್ಲಿ ಮಕರಂದವನ್ನು ಕುಡಿಕುಡಿದು ತಂದು ಗೂಡುಗಳಲ್ಲಿ ತುಂಬಿ ಬಾಯಿಗೆ ಮೆತ್ತು ಹಾಕುತ್ತವೆ. ಅದರಂತೆ ಪುಷ್ಪಧೂಳನ್ನು ತಂದು ತುಂಬಿಡುತ್ತವೆ. ಹೀಗೆ "ದಾಸ್ತಾನು" ಮಾಡಿದ ತುಪ್ಪವನ್ನು ತಮಗೆ ಬೇಕಾದಾಗ ಕುಡಿಯುತ್ತವೆ. ಮರಿಗಳಿಗೆ ಕುಡಿಸಿ ಬೆಳೆಸುತ್ತವೆ. ಮಳೆಗಾಲದಲ್ಲಿ ಚಳಿಗಾಲದಲ್ಲಿ ಹೂಗಳು ಕಡಿಮೆ. ಆಗ ಮಕರಂದ ತರುವುದಾಗಲಿ ಪರಾಗ ತರುವುದಾಗಲಿ ಕಷ್ಟ. ಆದ್ದರಿಂದ ಹೂವಿದ್ದಾಗ ನಿತ್ಯವೂ ತಂದು ತಂದು "ದಾಸ್ತಾನು" ಮಾಡುತ್ತವೆ. ಸುಗ್ಗಿಯಲ್ಲಿ ರೈತರು ಕಾಳುಕಡ್ಡಿಗಳನ್ನು ಚೀಲಗಳಲ್ಲಿ, ಹಗೇವುಗಳಲ್ಲಿ ಪಣತ (ಪಳತ) ಗಳಲ್ಲಿ ಏಕೆ ಕೂಡಿಡುತ್ತಾರೆ ?

ಶಂಕರ– ಉಳಿದ ಕಾಲದಲ್ಲಿ ಊಟಮಾಡಲಿಕ್ಕೆ !

ಅಣ್ಣ– ಅದರ ಹಾಗೆಯೇ ಜೇನು ಹುಳುಗಳೂ ಕೂಡ. ಇನ್ನೂ ಕೆಲವು ಪ್ರಾಣಿಗಳು ಹೀಗೆಯೆ ಆಹಾರವನ್ನು ದಾಸ್ತಾನು ಮಾಡಿರುತ್ತವೆ ಯಾವುವು ಗೊತ್ತೆ ?

ಶಂಕರ– ಇರುವೆಗಳು. ಇವು ಸಣ್ಣ ಸಣ್ಣ ಕಾಳಿನ ಚೂರುಗಳನ್ನು ತಮ್ಮ ಬಾಯಲ್ಲಿ ಕಚ್ಚಿಕೊಂಡು ಸಾಲು ಸಾಲಾಗಿ ಹರಿದು ನೆಲದ ತೂತುಗಳಲ್ಲಿ, ಗೋಡೆಗಳ ಸಂದುಗಳಲ್ಲಿ ಹೋಗುವುದನ್ನು ನೋಡಿದ್ದೇನೆ.

ಅಣ್ಣ – ಅವುಗಳ ಹಾಗೆ ಜೇನು ದುಂಬಿಗಳೂ ಕೂಡ ತುಪ್ಪವನ್ನೂ, ಪರಾಗವನ್ನೂ ಕೂಡಿಡುತ್ತವೆ.

ಶಂಕರ– ಅಣ್ಣ ಒಂದುಸಲಕ್ಕೆ ಒಂದು ಜೇನುದುಂಬಿ ಎಷ್ಟು ತುಪ್ಪ ತರುವುದು ?

ಅಣ್ಣ – ಸರಿಸರಿ, ಇನ್ನೆಷ್ಟು ತುಪ್ಪ ತಂದೀತು ! ಅರ್ಧ ತೊಟ್ಟಿನಷ್ಟೊ, ಕಾಲು ತೊಟ್ಟಿನಷ್ಟೋ ತಂದೀತು ! ಚಿಕ್ಕ ಹುಳುವಾದ ಅದು ಇನ್ನೆಷ್ಟು ತಂದೀತು. "ಹನಿಗೆ ಹನಿಕೂಡಿದರೆ ಹಳ್ಳ" "ತೆನೆಗೆ ತೆನೆ ಕೂಡಿದರೆ ರಾಶಿ" ಎಂದು ಹೇಳುವ ಗಾದೆಯನ್ನು ಕೇಳಿಲ್ಲವೆ ? ಸಾವಿರಾರು ಸಲ ಎಲ್ಲ ಹುಳುಗಳೂ ಗೂಡಿನಿಂದ ಹೂವಿದ್ದಲ್ಲಿಗೆ ಹಾರಿ ತಿರುಗಿ ತಿರುಗಿ ಕಷ್ಟಪಟ್ಟು ದುಡಿದು ಅಮೃತದಂಥ ಜೇನುತುಪ್ಪದ ದೊಡ್ಡ ಕೊಡವನ್ನೇ ಮಾಡಿಬಿಡುತ್ತವೆ. ಒಂದು ಸಣ್ಣ "ಚಮಚದಷ್ಟು" ತುಪ್ಪವನ್ನು ಕೂಡಿಸಲು ಒಂದು ಹುಳು ಸಾವಿರಾರು ಸಲ ಮಕರಂದವನ್ನು ಕುಡಿದು ತರಬೇಕಾಗುತ್ತದೆ. ನೋಡು, ಎಷ್ಟು ಕಷ್ಟ ಪಟ್ಟು ಕೆಲಸ ಮಾಡುತ್ತದೆ ಜೇನುಹುಳು.

ಶಂಕರ– ಕಷ್ಟಪಟ್ಟು ಕೆಲಸಮಾಡಿದರಲ್ಲವೆ ಸುಖಸಿಗುವುದು ! "ಕೈ ಕೆಸರಾದರೆ ಬಾಯಿ ಮೊಸರು" ಎಂಬ ಗಾದೆ ಸುಳ್ಳಲ್ಲಣ್ಣ. ಅದಿರಲಿ, ಇಲ್ಲಿ ಇನ್ನೊಂದು ಸಮಸ್ಯೆ–ಹೂವಿನಲ್ಲಿರುವ ಮಕರಂದ ಮತ್ತು ಪರಾಗಗಳನ್ನು ಎತ್ತಿಕೊಂಡು ಬಂದರೆ ಹೂವು ಹಾಳಾಗಿ ಪೈರು ನಷ್ಟವಾಗುವುದಿಲ್ಲವೆ ?

ಅಣ್ಣ – ಸರಿಯಾದ ಪ್ರಶ್ನೆ ಕೇಳಿದೆ ಶಂಕರ, ನೀನು ಬಲು ಬುದ್ಧಿವಂತ. ಜೇನು ಹುಳುಗಳು ಹೂವಿನಲ್ಲಿ ಕುಳಿತು ಮಕರಂದ ಪಾನಮಾಡಿದರೆ, ಪುಷ್ಪಧೂಳಿಯನ್ನು ಬಳಿದು



ಹೂವಿನ ಅಂದ ಚಂದ ಕಂಡು ದುಂಬಿ ಬಂದು ಎರಗಿದೆ, ಮಕರಂದ ಹೀರುತ್ತಿದೆ.

ತಂದರೆ, ಪೈರು ಇನ್ನೂ ಹುಲುಸಾಗಿ ಆಗುತ್ತದೆ. ಕೆಲವು ದೇಶಗಳಲ್ಲಿ ಪೈರು ಹುಲುಸಾಗಲು ಹೊಲಗಳಲ್ಲಿ ಜೇನು ಸಾಕುತ್ತಾರೆ. ದೇವರು ಹೂವುಗಳಿಗೆ ಒಳ್ಳೆಯ ಸುವಾಸನೆಯನ್ನೂ, ಹಲವಾರು ಬಗೆಬಗೆಯ ಬಣ್ಣಗಳನ್ನೂ ಮಾಡಿರುವುದು ಮತ್ತು ಮಕರಂದ, ಪುಷ್ಪಧೂಳಿಯಂಥ ಸಿಹಿ ಪದಾರ್ಥವನ್ನು ಅದರಲ್ಲಿ ಇಟ್ಟಿರುವುದು ದುಂಬಿಗಳು ಬಂದು ಹೂವಿನಲ್ಲಿ ಕೂಡುವುದಕ್ಕಾಗಿಯೆ. ಹೂವುಗಳ ಬಣ್ಣಕ್ಕೂ, ಸುಗಂಧಕ್ಕೂ, ಚೆಲುವಿಗೂ, ಸಿಹಿಯಾದ

ಮಕರಂದಕ್ಕೂ ಆಸೆಪಟ್ಟು, ದುಂಬಿ ಅದರಲ್ಲಿ ಕುಳಿತು ಮಕರಂದವನ್ನು ಕುಡಿಯುತ್ತದೆ. ಮಕರಂದ ಪಾನಮಾಡಿದರೆ ದುಂಬಿಗೂ ಲಾಭ, ಹೆಚ್ಚು ಕಾಳುಹೊಂದಲು ಹೂವಿಗೂ ಲಾಭ. ಸೃಷ್ಟಿಯ ನಿಯಮವೇ ಹೀಗೆ. ಒಂದರಿಂದ ಇನ್ನೊಂದಕ್ಕೆ ಲಾಭ.

೪

"ಜೇನನ್ನು ಸಾಕುತ್ತಾರೆ" ಎಂಬ ಅಣ್ಣನ ಮಾತನ್ನು ಕೇಳಿದ ಮೇಲೆ ಶಂಕರನ ಮನಸ್ಸಿನಲ್ಲಿ ಹಲವಾರು ಯೋಚನೆಗಳುಂಟಾದವು. ಇಂಥ ಸಣ್ಣ ಹುಳುಗಳನ್ನು ಹೇಗೆ ಸಾಕುವುದು! ದನ,



ಹೊಲದಲ್ಲಿ ಹಿತ್ತಲಲ್ಲಿ, ತೋಟದಲ್ಲಿ ನೆರಳಿರುವ ಕಡೆ ಪೆಟ್ಟಿಗೆಗಳನ್ನಿಟ್ಟು ಜೇನು ಸಾಕಬಹುದು.

ಕುರಿ, ಕೋಳಿ, ಮೇಕೆಯಲ್ಲ. ಹೇಗೆ ಸಾಕಲು ಸಾಧ್ಯ! ಎಂಬ ಯೋಚನೆಯಿಂದ ಅಣ್ಣನನ್ನು ಕುರಿತು "ಅಣ್ಣ, ಜೇನು ಸಾಕಬಹುದೆ?" ಎಂದು ಪ್ರಶ್ನಿಸಿದನು.

ಅಣ್ಣ – ಜೇನನ್ನು ಸಾಕಬಹುದು. ಕೋಳಿ, ಕುರಿ, ದನಗಳನ್ನು ಸಾಕಿದ ಹಾಗೆ ಇವನ್ನೂ ಸಾಕಿ ಬೇಕಾದಷ್ಟು ಲಾಭ ಪಡೆಯ ಬಹುದು. ಆದರೆ ಎಲ್ಲ ಜೇನುಗಳೂ ಸಾಕಲಿಕ್ಕೆ ಬರುವುದಿಲ್ಲ.

ಶಂಕರ– ಎಲ್ಲ ಜೇನು ಎಂದೆಯಲ್ಲ ; ಜೇನುಗಳಲ್ಲಿ ಬೇರೆ ಬೇರೆ ಬಗೆಗಳಿವೆಯೆ !

ಅಣ್ಣ – ಹೌದು ಜೇನುಗಳಲ್ಲಿ ನಾಲ್ಕು ಪ್ರಕಾರಗಳುಂಟು. ಅಗೋ, ಆ ಗಿಡದಲ್ಲಿರುವ ಜೇನೇ ಹೆಜ್ಜೇನು. ದಪ್ಪ ದಪ್ಪ ಹುಳು ಗಳು. ಹಿರಿದಾದ ಹುಳುಗಳಾದ್ದರಿಂದಲೇ ಇದಕ್ಕೆ ಹೆಜ್ಜೇ ನೆನ್ನುತ್ತಾರೆ. ಇವುಗಳಿಗೆ ಬಲು ಸಿಟ್ಟು. ಬಹು ಕಡಿಯು ತ್ತವೆ; ತುಪ್ಪವನ್ನೂ ಬಹಳ ಕೊಡುತ್ತವೆ. ಆದರೆ ಸಾಕಲು ಬರುವುದಿಲ್ಲ. ಇದೇ ದೊಡ್ಡ ದೊಡ್ಡ ಮರ, ಕೋಡು ಗಲ್ಲು, ಸೇತುವೆಗಳಲ್ಲಿ ಗೂಡು ಕಟ್ಟತಕ್ಕಂಥವು. ಇನ್ನೊಂದು ಪ್ರಕಾರದ ಜೇನಿದೆ, ಅದರ ಹೆಸರು ಕೋಲು ಜೇನು ಎಂದು. ಅದಕ್ಕೆ ಚಿಟ್ಟೆ ಜೇನು, ನೊಣ ಜೇನು ಎಂದೂ ಹೆಸರುಂಟು. ಇದರ ಹುಳು ಚಿಕ್ಕವು. ಇವಕ್ಕೂ ಸಿಟ್ಟು ಹೆಚ್ಚು. ಇವೂ ಮನುಷ್ಯರನ್ನು ಹೆಚ್ಚಾಗಿ ಕಡಿಯುತ್ತವೆ. ಇವು ಚಿಕ್ಕ ಚಿಕ್ಕ ಪೊದೆಗಳಲ್ಲಿ, ಗಿಡಗಂಟೆಗಳಲ್ಲಿ, ಮರದ ಪೊಟರೆಗಳಲ್ಲಿ ಗೂಡು ಕಟ್ಟಿ ತುಪ್ಪ ಮಾಡುತ್ತವೆ. ಇದೂ ಕೂಡ ಸಾಕಲು ಬರುವುದಿಲ್ಲ. ಈ ಎರಡೂ ಜೇನುಗಳು ಮನುಷ್ಯನನ್ನು ನಂಬುವುದಿಲ್ಲ. ಅಲ್ಲದೆ ಪದೇ ಪದೇ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹಾರಿ ಹೋಗುತ್ತವೆ.

ಸಾಕುವುದಕ್ಕೆ ಯೋಗ್ಯವಾದ ಜೇನೆಂದರೆ "ತುಡುವಿ" ಎಂಬ ಹೆಸರಿನ ಜೇನು. ಇದನ್ನು "ತೊಡವಿ" ಎಂದೂ ಕೆಲವರು



ಕೋಲು ಜೇನು ಪೊದೆಗಳಲ್ಲಿ ಗೂಡು ಕಟ್ಟುತ್ತದೆ.

ಕರೆಯುತ್ತಾರೆ. ಈ ಜೇನುಹುಳು ಹೆಜ್ಜೇನಿಗಿಂತ ಸ್ವಲ್ಪ ಚಿಕ್ಕದು; ಕೋಲು ಜೇನು ಹುಳುವಿಗಿಂತ ಸ್ವಲ್ಪ ದೊಡ್ಡದು. ಇವು ಹುತ್ತಗಳಲ್ಲಿ, ಆಳವಾದ ಬಿರುಕುಗಳಲ್ಲಿ, ಮರದ ಪೊಟರೆಗಳಲ್ಲಿ ಗೂಡು ಕಟ್ಟುತ್ತವೆ. ಇವಕ್ಕೆ ಸಿಟ್ಟು ಕಡಿಮೆ. ಕಡಿಯುವುದೂ ಕಡಿಮೆ. ಇವನ್ನೇ ಎಲ್ಲ ಕಡೆಗೂ ಸಾಕುತ್ತಾರೆ. ಇವು ಹೆಚ್ಚಾಗಿ ತುಪ್ಪವನ್ನೂ ಕೊಡುತ್ತವೆ. ಹೆಜ್ಜೇನು ಕೋಲು ಜೇನುಗಳಂತೆ ಈ ಜೇನು ಪದೇ ಪದೇ ಬೇರೆ ಕಡೆಗಳಿಗೆ ಹಾರಿಹೋಗುವುದಿಲ್ಲ. ಇನ್ನೂ ಒಂದು ತರಹ ಜೇನಿದೆ; ಅದರ ಹೆಸರು "ನಸರಿ"



ಸಾಕಬಹುದಾದ ''ತುಡುವಿ'' ಜೇನು ಹುಳುಗಳು

ಎಂದು. ಇದೂ ಸಾಕಲು ಬರುತ್ತದೆ. ಈ ಹುಳುಗಳು ಎಲ್ಲ ಜೇನಿಗಿಂತ ಚಿಕ್ಕವು. ತುಪ್ಪವಂತೂ ತೀರ ಕಡಿಮೆ. ಆದ್ದರಿಂದ ಇದನ್ನು ಯಾರೂ ಸಾಕುವುದಿಲ್ಲ. ಇದನ್ನು ಸಾಕಿದರೆ ಲಾಭ ಕಡಿಮೆ, ಖರ್ಚು ಹೆಚ್ಚು.

ಶಂಕರ– ಅಣ್ಣ, ಈ ಜೇನು ಹುಳುಗಳನ್ನು ಹೇಗೆ ಸಾಕುವುದೆಂಬುದೇ ತಿಳಿಯಲಿಲ್ಲ.

ಅಣ್ಣ– ತಮ್ಮ, ಈ ಜೇನನ್ನು ಸಾಕಲು ಒಂದು ತರಹ ಪೆಟ್ಟಿಗೆಯನ್ನು ಮಾಡಿಸಬೇಕು. ಅಥವಾ ನಮ್ಮ ದೇಶದ ವ್ಯವಸಾಯ ಇಲಾಖೆಯಲ್ಲಿ "ಎಪಿಯರಿಸ್ಟ್" ಎಂಬ ಅಧಿಕಾರಿಗಳೊಬ್ಬರಿದ್ದಾರೆ. ಜೇನು ಸಾಕುವವರಿಗೆ ಸಹಾಯ ಮಾಡುವುದೇ ಈ "ಎಪಿಯರಿಸ್ಟ್" ಎಂಬ ಹೆಸರಿನ ಅಧಿಕಾರಿಗಳ ಕೆಲಸ. ನಮಗೆ ಪೆಟ್ಟಿಗೆಗಳನ್ನು ಬೇಕೆಂದು ಬರೆದರೆ, ಅವರೇ



ಜೇನು ಸಾಕುವ ಪೆಟ್ಟಿಗೆ      ಪೆಟ್ಟಿಗೆಯು ಮುಚ್ಚಳ ತೆರೆದಿದೆ ಒಳಗೆ ಜೇನು ಗೂಡುಗಳಿವೆ.

ನಮಗೆ ಜೇನು ಸಾಕುವ ಪೆಟ್ಟಿಗೆಗಳನ್ನು ಕೊಡುತ್ತಾರೆ. ನಮಗೆ ಗೊತ್ತಿಲ್ಲದ ವಿಷಯ ತಿಳಿಸುತ್ತಾರೆ. ಜೇನು ಹುಳುಗಳನ್ನೂ ಕೊಡುತ್ತಾರೆ. ಜೇನನ್ನು ಸಾಕಬೇಕೆಂದು ಯೋಚಿಸಿ ನಾನು ಅವರಿಗೆ ಪೆಟ್ಟಿಗೆಗಳು ಬೇಕೆಂದು ಬರೆದಿದ್ದೇನೆ. ಜೇನು ಗೂಡುಗಳೂ ಬೇಕೆಂದು ತಿಳಿಸಿದ್ದೇನೆ. ಇಷ್ಟರಲ್ಲಿ ಅವರು ಕಳುಹಿಸಬಹುದು.

ಶಂಕರ– ಅಣ್ಣ, ಬೇಗನೆ ಕಳುಹಿಸಲು ಅವರಿಗೆ ಇನ್ನೊಂದು ಕಾಗದವನ್ನು ಬರೆ. ನಾವೂ ಜೇನು ಸಾಕಿ ಅದರ ಪ್ರಯೋಜನ ಪಡೆಯೋಣ. ನನಗೆ ಜೇನೆಂದರೆ ಬಹಳ ಆಸೆ.

ಅಣ್ಣ –ಆಸೆಯಾಗದೇನು ಶಂಕರ, ತುಪ್ಪ ಎಷ್ಟು ಮಧುರ ನೋಡು!

ಶಂಕರ– ಅಣ್ಣ, ಆ ಪೆಟ್ಟಿಗೆಯಲ್ಲಿ ಅವು ಹೇಗೆ ಗೂಡು ಕಟುತ್ತವೆ?

ಅಣ್ಣ – ಪೆಟ್ಟಿಗೆಯಲ್ಲಿ ಮೂರು ಭಾಗ. ಮೇಲ್ಭಾಗವೇ ಮುಚ್ಚಳ. ಅದನ್ನು ತೆಗೆದಾಗ ಮಧ್ಯದ ಭಾಗದಲ್ಲಿ ಎರಡೆರಡು ಬೆರಳು ಅಗಲದ ಐದಾರು ಚೌಕು ಚೌಕಾದ ಅಡ್ಡ ಪಟ್ಟಿಗಳಿರುತ್ತವೆ. ಆ ಪಟ್ಟಿಗಳಿಗೆ ಗೂಡು ಕಟ್ಟುತ್ತವೆ. ಮಧ್ಯದ ಭಾಗವನ್ನು ಎತ್ತಿದರೆ ಕೆಳಭಾಗದ ಪೆಟ್ಟಿಗೆಯಲ್ಲೂ ಪುನಃ ಎರಡೆರಡು ಬೆರಳಗಲದ ಚೌಕಾದ ಐದಾರು ಅಡ್ಡ ಪಟ್ಟಿಗಳಿರುತ್ತವೆ. ಅವಕ್ಕೂ ಜೇನು ಗೂಡುಕಟ್ಟುತ್ತದೆ. ಹುಡುವೆ ಜೇನು



ಪೆಟ್ಟಿಗೆಯಲ್ಲಿನ ಎರಡು ಬೆರಳಗಲದ ಚೌಕಟ್ಟಿಗೆ ಜೇನು ಗೂಡು ಕಟ್ಟಿದೆ.
ಒಂದು ಪೆಟ್ಟಿಗೆಯಲ್ಲಿ ಇಂಥ ಹತ್ತಾರು ಚೌಕು ಪಟ್ಟಿಗಳಿರುತ್ತವೆ.

ಹುಳು ಪೆಟ್ಟಿಗೆಯಲ್ಲಿ ಎಷ್ಟು ಚೌಕಟ್ಟಿನ ಅಡ್ಡ ಪಟ್ಟಿಗಳಿರುತ್ತವೆಯೊ ಅವಕ್ಕೆಲ್ಲ ಗೂಡು ಕಟ್ಟುತ್ತವೆ. ಎಷ್ಟು ಗೂಡು ಕಟ್ಟುತ್ತದೆಯೊ ಅಷ್ಟು ತುಪ್ಪದ ಕೊಡಗಳನ್ನು ತಯಾರಿಸುತ್ತದೆ. ಉಳಿದ ಹುಳುಗಳು ಇಷ್ಟೊಂದು ಗೂಡು ಕಟ್ಟು

ವುದಿಲ್ಲ. ಅವು ಒಂದೊಂದೇ ಗೂಡು ಕಟ್ಟುತ್ತವೆ. ಆದ್ದರಿಂದಲೇ 'ತುಡುವಿ' ಜೇನನ್ನು ಸಾಕುವುದು.

ಶಂಕರ– ಅಣ್ಣ ತುಪ್ಪದ ಕೊಡ ಅಂದೆಯಲ್ಲ !

ಅಣ್ಣ – ಹೌದು ; ಜೇನುಗೂಡಿನಲ್ಲಿ ತುಪ್ಪವಿರುವ ಭಾಗಕ್ಕೆ "ತುಪ್ಪದ ಕೊಡ" ಎನ್ನುತ್ತಾರೆ.

ಶಂಕರ– ಸರಿ ಸರಿ, ಅಣ್ಣ ನಾಲ್ಕು ಜೇನಿನ ಹೆಸರು ಹೇಳಿದೆ. ಅವುಗಳ ಹೆಸರು ಮರೆತು ಹೋದುವು ಇನ್ನೊಮ್ಮೆ ಹೇಳು. ಪುಸ್ತಕದಲ್ಲಿ ಬರೆದುಕೊಳುತ್ತೇನೆ.

ಅಣ್ಣ – ಹೌದು ಹೊಸದಾಗಿ ಕೇಳಿದ ಹೆಸರು ಬೇಗನೆ ಮರೆಯುತ್ತವೆ, ಬರೆದು ಕೊಂಡು ಬಿಟ್ಟರೆ ಪದೇ ಪದೇ ನೋಡಿ ನೆನಪಿನಲ್ಲಿಟ್ಟುಕೊಳಬಹುದು. ಜೇನುಗಳು ನಾಲ್ಕು ಬಗೆ. ಹೆಜ್ಜೇನು, ತುಡುವಿ ಜೇನು, ಕೋಲು ಜೇನು, ನಸರಿ ಜೇನು ಎಂದು. ತುಡುವಿ ಜೇನೇ ಸಾಕಲಿಕ್ಕೆ ಬರುವಂಥದು.

೫

ಜೇನಿನ ಈ ಚಮತ್ಕಾರದ ಕಥೆ ಕೇಳಿದಮೇಲೆ ಶಂಕರನಿಗೆ ಜೇನು ಹುಳುಗಳು ಮೊಟ್ಟೆಯಿಟ್ಟು ಮರಿಮಾಡುವ ರೀತಿಯನ್ನು ಕೇಳಬೇಕೆಂಬಾಸೆಯಾಯಿತು. ಆಗ ಅಣ್ಣನನ್ನು ಕುರಿತು "ಅಣ್ಣ ಇಷ್ಟೆಲ್ಲ ಸರಿ, ಜೇನು ಹುಳುಗಳು ಮರಿ ಮಾಡುವುದನ್ನೂ, ಅವನ್ನು ಜೋಪಾನ ಮಾಡುವ ರೀತಿಯನ್ನೂ ತಿಳಿಸು" ಎಂದು ಕೇಳಿದನು. ಆಗ ಅಣ್ಣ "ನಿನಗೆ ಕೇಳಬೇಕೆಂಬಾಸೆ ; ನನಗೆ ಹೇಳಬೇಕೆಂಬಾಸೆ. ಜೇನು ಹುಳುಗಳ ಸಮಾಜಜೀವನ, ಸಹಕಾರ ಜೀವನ, ಒಗ್ಗಟ್ಟು ಇವು ಬಲು ಸ್ವಾರಸ್ಯವಾದವುಗಳು. ಇದು ಬಲು ಕಠಿಣವಾದದ್ದು. ಲಕ್ಷ್ಯಗೊಟ್ಟು ಕೇಳು" ಎಂದು ಹೇಳುವುದಕ್ಕೆ ಪ್ರಾರಂಭಿಸಿದನು.

"ಜೇನು ಹುಳುಗಳಲ್ಲಿ ಮೂರು ಬಗೆ : (೧) ಯಾವಾಗಲೂ ಒಂದಿಲ್ಲೊಂದು ಕೆಲಸವನ್ನು ಮಾಡುತ್ತಲೇ ಇರುವ ಹೆಣ್ಣು ಹುಳು, (೨) ಯಾವ ಕೆಲಸವನ್ನೂ ಮಾಡದೆ ಗೂಡಿನಲ್ಲಿ ಕುಳಿತು ಕಾಲ ಕಳೆಯುವ ಗಂಡು ಹುಳು. (೩) ಗೂಡಿನಲ್ಲಿ ಮೊಟ್ಟೆಗಳನ್ನಿಟ್ಟು ವಂಶವನ್ನು ಬೆಳೆಯಿಸುವ ರಾಣಿ ಹುಳು–ಎಂದು ಅವು ಮೂರು ಪ್ರಕಾರ ರಾಣಿ ಹುಳುವಿಗೆ ಅರಸಿಹುಳು, ಅಥವಾ ತಾಯಿ ಹುಳು ಎಂದೂ ಹೆಸರು.

ಶಂಕರ– ಹೆಣ್ಣುಹುಳು, ಗಂಡುಹುಳು, ಅರಸಿಹುಳು ಈ ಮೂರು ಬಗೆಯ ಹುಳುಗಳು ಎಲ್ಲ ಬಗೆಯ ಜೇನಿನಲ್ಲೂ ಇರುತ್ತವೆಯೆ ?




ರಾಣಿ ಜೇನು
(ಅರಸಿ ಹುಳು)

ಅಣ್ಣ– ಹೌದು, ನಾಲ್ಕು ಪ್ರಕಾರದ ಜೇನಿನಲ್ಲೂ ಈ ಮೂರು ಬಗೆಯ ಹುಳುಗಳಿರುತ್ತವೆ. ಸಾವಿರಾರು ಈ ಹುಳು




ಸೋಮಾರಿ
ಗಂಡು ಜೇನು




ಕೆಲಸಗಾರ ಜೇನು
(ಹೆಣ್ಣು)

ಗಳೆಲ್ಲ ಒಗ್ಗಟ್ಟಿನಿಂದ ಬಾಳುವುದನ್ನು ನೋಡಿದರೆ, ಮನುಷ್ಯನೂ ನಾಚಬೇಕು. ಅಂಥ ಸಮಾಜ ಜೀವನ, ಸಹಕಾರ ಜೀವನ ಮಾಡುವ ಗುಣವನ್ನು ದೇವರು ಇವಕ್ಕೆ ಕೊಟ್ಟಿದ್ದಾನೆ.

ಈ ಮೂರು ಜಾತಿಯ ಹುಳುಗಳ ಕೆಲಸಗಳೂ ಮೂರು ಪ್ರಕಾರ. ಇವುಗಳಲ್ಲಿ ರಾಣಿ ಜೇನೆಂಬ ಹುಳು ಗೂಡಿಗೆ ಒಂದೇ ಇರುತ್ತದೆ. ಇದು ಎಲ್ಲ ಹುಳುಗಳಿಗಿಂತಲೂ ಉದ್ದವಾಗಿ ದಪ್ಪವಾಗಿರುತ್ತದೆ. ಗಂಡು ಜೇನು ಇದಕ್ಕೂ ಸ್ವಲ್ಪ ಚಿಕ್ಕದು. ಪ್ರತಿಯೊಂದು ಹುಳುವಿಗೂ ಆರಾರು ಕಾಲು, ಎರಡೆರಡು ಮೀಸೆ, ಎರಡೆರಡು ರೆಕ್ಕೆಗಳಿರುತ್ತವೆ. ಚಿಕ್ಕ ಚಿಕ್ಕ ಕೂದಲುಗಳು ಮೈತುಂಬ ಇರುತ್ತವೆ.

ರಾಣಿಜೇನು ಅಥವಾ ತಾಯಿಜೇನು ಎಂದು ಕರೆಸಿಕೊಳ್ಳುವ ಈ ಹುಳು ಎಲ್ಲ ಹುಳುಗಳಿಗೂ ತಾಯಿಯಾದ್ದರಿಂದ ಇದಕ್ಕೆ ತಾಯಿಜೇನು ಎನ್ನುತ್ತಾರೆ. ಇದರ ಸುತ್ತ ಯಾವಾಗಲೂ ನೂರಾರು ಕೆಲಸಗಾರ ಜೇನು ಹುಳುಗಳು ಸೇವಕರಂತೆ ಹಿಂಬಾಲಿಸಿಕೊಂಡು ಸೇವೆ ಮಾಡುತ್ತವಾದ್ದರಿಂದ ರಾಣಿಜೇನು ಅಥವಾ ಅರಸಿಜೇನು ಎನ್ನುತ್ತಾರೆ. ನಿಜವಾಗಿ ಇದು ಮೊಟ್ಟೆಗಳನ್ನಿಡುವ ಒಂದು ಯಂತ್ರವಿದ್ದ ಹಾಗೆಯೇ. ಇದು ತನ್ನ ಜೀವನದ ಉದ್ದಕ್ಕೂ ಮೊಟ್ಟೆಗಳನ್ನಿಡುವುದರಲ್ಲೇ ಕಾಲ ಕಳೆಯುವುದು. ಜೇನು ಗೂಡಿನಲ್ಲಿ ತುಪ್ಪ ತುಂಬಿಡುವ, ಪರಾಗವನ್ನು ಕೂಡಿಡುವ ಗೂಡುಗಳನ್ನು ಬಿಟ್ಟು, ಉಳಿದ ಗೂಡುಗಳೆಷ್ಟಿವೆಯೊ ಎಲ್ಲದರಲ್ಲೂ ಒಂದೊಂದು ಮೊಟ್ಟೆಯಿಡುವುದು. ಮೊಟ್ಟೆಯಿಡುವ ಸಮಯದಲ್ಲಿ ಇದು ಬಹಳ ತುಪ್ಪವನ್ನು ಕುಡಿಯುತ್ತದೆ. ಮೊಟ್ಟೆಯಿಡುವುದೊಂದೇ ಇದರ ಕೆಲಸ.

ಶಂಕರ– ಅಣ್ಣ, ತಾಯಿ ಜೇನುಹುಳು ದಿನಕ್ಕೆ ಎಷ್ಟು ಮೊಟ್ಟೆ ಯಿಡುತ್ತದೆ ?

ಅಣ್ಣ– ಮೊದಮೊದಲು ಒಂದೆರಡು ದಿನ ಹತ್ತು ಹನ್ನೆರಡು ಮೊಟ್ಟೆಗಳಿಂದ ಪ್ರಾರಂಭಮಾಡಿ, ಅನಂತರ ದಿನಾಲು ನೂರು–ಇನ್ನೂರು–ಮುನ್ನೂರು–ಸಾವಿರದವರೆಗೂ

ಮೊಟ್ಟೆ ಇಡುತ್ತ ಹೋಗುವುದು. ಗೂಡಿನ ಎರಡ
ಮಗ್ಗುಲಲ್ಲೂ ತಿರುಗಾಡುವುದು. ಯಾವ ಯಾವ ಗೂಡ
ಗಳಲ್ಲಿ ಮೊಟ್ಟೆಯಿಲ್ಲವೆಂಬುದನ್ನು ನೋಡಿ ನೋಡಿ, ಅಲ್ಲ
ಮೊಟ್ಟೆಯಿಡುವುದು. ಗೂಡುಗಳೆಲ್ಲ ಮೊಟ್ಟೆಗಳಿಂ
ತುಂಬಿದ ಮೇಲೆ ಮತ್ತೊಂದು ಚೌಕದ ಗೂಡಿನಲ್ಲಿ ಮೊಟ್
ಯಿಡತೊಡಗುವುದು. ಇದು ಮೊಟ್ಟೆಯಿಡುವ ಕಾಲದ

ಗೂಡಿನಲ್ಲಿ ರಾಣಿ ಜೇನು ಮೊಟ್ಟೆಯಿಡುತ್ತಿದೆ. ಸುತ್ತ ಕೆಲಸಗಾರ ನೊಣಗಳು
ಅದಂ ಸೇವೆ ಮಾಡುತ್ತಿವೆ.



ಮೊಟ್ಟೆಯಿಡುವ ರೀತಿ

ಇದರ ಸುತ್ತ ನೂರಾರು ಕೆಲಸಗಾರ ಜೇನುಗಳು ಸೇ
ಮಾಡುತ್ತಿರುತ್ತವೆ. ಮೈ ನೆಕ್ಕುತ್ತಿರುತ್ತವೆ. ಆಯಾ
ಪರಿಹಾರ ಮಾಡುತ್ತಿರುತ್ತವೆ. ಹೆಚ್ಚು ಹೆಚ್ಚಾಗಿ ತು

ವನ್ನು ತಂದು ತುಂಬುತ್ತಿರುತ್ತವೆ. ಇದಕ್ಕೆ ತುಪ್ಪ ಕುಡಿಸಿ ದಷ್ಟು, ಸೇವೆ ಮಾಡಿದಷ್ಟು ಹೆಚ್ಚಾಗಿ ಮೊಟ್ಟೆ ಇಡುವುದು. ಇದರ ಹೊಟ್ಟೆಯ ಕೆಳ ಭಾಗದಲ್ಲಿ ಮೊಟ್ಟೆಯನ್ನಿಡಲು ಮೊನಚಾದ ಕೊಳವೆಯೊಂದಿದ್ದು ಅದರಿಂದಲೇ ಮೊಟ್ಟೆ ಗಳನ್ನಿಡುವುದು.

ಶಂಕರ– ಸರಿ ಜೇನುಗಳ ಹುಟ್ಟಿಗೆ ರಾಣಿ ಜೇನುಹುಳುವೇ ಕಾರಣ ವೆಂದಹಾಗಾಯಿತು. ಅನಂತರ ?

ಅಣ್ಣ– ಅನಂತರ ಮುಖ್ಯವಾದ ಅಂಶವೆಂದರೆ ಸತತವೂ ಕೆಲಸ ಮಾಡುವ ಹೆಣ್ಣು ಹುಳುಗಳ ವಿಚಾರ : ಗೂಡಿನಲ್ಲಿ ಇವೇ ಬಹು ಮುಖ್ಯವಾದವುಗಳು. ಜೇನು ಗೂಡಿನಲ್ಲಿ ಇವುಗಳೇ ಎಲ್ಲಕ್ಕೂ ಹೆಚ್ಚು ಸಂಖ್ಯೆಯಲ್ಲಿರುತ್ತವೆ. ಮತ್ತು ಕೆಲಸವೂ ಹೆಚ್ಚು. ಇವನ್ನು ಹೆಣ್ಣು ಹುಳುಗಳೆಂದು ಕರೆದರೂ ಇದಕ್ಕೆ ಮೊಟ್ಟೆಯಿಟ್ಟು ಸಂತಾನ ಹೆಚ್ಚಿಸುವ ಶಕ್ತಿಯಿಲ್ಲ. ರಾಣಿಜೇನು ಇಡುವ ತತ್ತಿಗಳನ್ನೇ ತಮ್ಮ ತತ್ತಿಗಳೆಂದು ಭಾವಿಸಿ ಮರಿಗಳನ್ನು ಮಾಡಿ ಅವುಗಳ ಲಾಲನೆ ಪಾಲನೆ ಮಾಡುತ್ತವೆ.

ಇವು ಸ್ವಲ್ಪಹೊತ್ತು ಸುಮ್ಮನೆ ಕಾಲ ಕಳೆಯದೆ ಏನಾದರೂ ಕೆಲಸ ಮಾಡುತ್ತಲೇ ಇರುತ್ತವೆ. ಹೂವಿನಿಂದ ಹೂವಿಗೆ ಹಾರಿ ಮಕರಂದ ಕುಡಿದು ತಂದು ತುಪ್ಪವನ್ನಾಗಿ ಮಾಡಿ ಗೂಡು ತುಂಬುವುದು ; ಪರಾಗವನ್ನು ಗೂಡಿನಲ್ಲಿ ಸಂಗ್ರಹಿಸುವುದು ; ಚಿಕ್ಕ ಚಿಕ್ಕ ಮರಿಗಳಿಗೆ ಸ್ವಲ್ಪ ತುಪ್ಪ ಸ್ವಲ್ಪ ಪರಾಗವನ್ನು ಕಲಸಿ ತಿನ್ನಿಸುವುದು ; ಅವುಗಳನ್ನು ಜೋಪಾನ ಮಾಡುವುದು ; ರಾಣಿ ಜೇನಿನ ಸುತ್ತಮುತ್ತ ಸೇವಕರಂತೆ ನೆರೆದು ಸೇವೆಮಾಡುವುದು ; ಗೂಡಿನಲ್ಲಿ ಕೊಳೆ ಸೇರದಂತೆ ನೋಡಿಕೊಳ್ಳುವುದು ; ಗೂಡಿನಲ್ಲಿ

ಚಿಕ್ಕ ಮರಿಗಳೇನಾದರೂ ಸತ್ತರೆ ಅವನ್ನು ಹೊರಗೆ ಹಾಕಿ ಗೂಡನ್ನು ಸ್ವಚ್ಛ ಮಾಡುವುದು ; ಮೇಣದಿಂದ ಗೂಡುಗಳನ್ನು ಹೊಸ ಹೊಸದಾಗಿ ಕಟ್ಟುವುದು ; ವೈರಿಗಳು ಒಂದು ವೇಳೆ ಬಂದರೆ ಅವನ್ನು ಕಡಿದು ಕಡಿದು ಓಡಿಸುವುದು; ಪ್ರತಿಯೊಂದು ಗೂಡಿಗೂ ಪದೇ ಪದೇ ತಿರುಗಿ ಮರಿಗಳಿಗೆ ಪೊತ್ತುಹೊತ್ತಿಗೆ ಆಹಾರ ಕೊಡು ವುದು ಇಷ್ಟೆಲ್ಲ ಕೆಲಸಗಳನ್ನು ಹೆಣ್ಣು ಹುಳುಗಳೇ ಮಾಡುತ್ತವೆ. ಆದ್ದರಿಂದಲೇ ಅವುಗಳಿಗೆ 'ಕೆಲಸಗಾರ ಜೇನು' ಎನ್ನುವುದು.

ಶಂಕರ– ಅಬ್ಬಾ ! ಎಷ್ಟೊಂದು ಕೆಲಸ ಈ ಹೆಣ್ಣುಹುಳುಗಳಿಗೆ ! ತೆರಪಿಲ್ಲದ ಕೆಲಸ ಪಾಪ ! ಮಕರಂದ ತಂದು ತುಪ್ಪಮಾಡಿ ಕೂಡಿಡುವುದು ; ಪರಾಗ ಸಂಗ್ರಹಿಸುವುದು; ಮರಿಗಳನ್ನು ಜೋಪಾನಮಾಡುವುದು ; ರಾಣಿ ಜೇನಿನ ಸೇವೆ ; ಗೂಡಿನ ಕೊಳೆ ತೆಗೆಯುವುದು; ಮೇಣದಿಂದ ಗೂಡು ಕಟ್ಟುವುದು; ವೈರಿಗಳು ಬಾರದಂತೆ ನೋಡುವುದು; ಮರಿಗಳಿಗೆ ಆಹಾರ ಕೊಡುವುದು–ಅಣ್ಣ, ಇವು ನಿಜವಾಗಿ ಕರ್ಮಯೋಗಿ ಗಳಿದ್ದ ಹಾಗೆ.

ಅಣ್ಣ– (ನಕ್ಕು) ಹೌದು ಹೌದು. ಹೆಣ್ಣು ಜೇನುಹುಳು ನಿಜ ವಾಗಿ ಕರ್ಮಯೋಗಿಗಳು, ತ್ಯಾಗಿಗಳು, ಪರೋಪಕಾರಿಗಳು, ಸಹಕಾರಿ ಜೀವಿಗಳು-ಏನೆಲ್ಲವನ್ನೂ ಹೇಳಬಹುದು.

ಶಂಕರ– ಅಣ್ಣ, ಗಂಡುಹುಳುಗಳಿಗಾಗಿ ಇನ್ನೇನೂ ಕೆಲಸ ಉಳಿ ಯಲೇ ಇಲ್ಲವಲ್ಲ.

ಅಣ್ಣ– ಹೌದು ಅವಕ್ಕೆ ಏನೂ ಕೆಲಸವಿಲ್ಲ. ಅವು ಕೇವಲ ಕೆಲಸ ಗಾರ ಜೇನುಗಳು ಕೂಡಿಟ್ಟ ತುಪ್ಪವನ್ನು ಕುಡಿಯುವುದು; ಗೂಡಿನಲ್ಲಿ ಸುಮ್ಮನೆ ಕುಳಿತು ಗೂಡನ್ನು ಬೆಚ್ಚಗಿಡುವುದು ಇಷ್ಟೆ ಅವುಗಳ ಕೆಲಸ. ರಾಣಿಜೇನು ಮೊಟ್ಟೆಯಿಟ್ಟು

ತಾಯಿಯೆನಿಸುವುದಕ್ಕೆ ಮಾತ್ರ ಒಂದು ಗಂಡು ಹುಳುವಿನ ಉಪಯೋಗಲುಂಟು. ಗಂಡು ನೊಣಗಳಲ್ಲೆಲ್ಲ ಬಲಿಷ್ಠ ವಾದ ಹುಳು ಆ ಕಲಸ ಮಾಡುತ್ತದೆ. ಆ ಕ್ಷಣದಲ್ಲಿ ಅದು ಸತ್ತುಹೋಗುತ್ತದೆ. ಈ ಹುಳುಗಳಿಗೆ ಅಂದರೆ, ಗಂಡು ಹುಳುಗಳಿಗೆ ಮಕರಂದವನ್ನು ಕುಡಿಯಲು ಕಾರಣವಾದ ಕೊಳವೆಯಂಥ ಮೂತಿಯಾಗಲಿ, ಪರಾಗವನ್ನು ಬಳಿದು ಕೊಂಡು ಬರುವ ಸಾಧನವಾಗಲಿ ಇಲ್ಲ. ಆದುದರಿಂದ ಜೇನುಗೂಡಿನಲ್ಲಿ ಮುಖ್ಯ ಕೆಲಸ ಕಾರ್ಯಗಳೆಲ್ಲ ಕೆಲಸಗಾರ ಜೇನೆನಿಸಿದ ಹೆಣ್ಣು ಜೇನುಹುಳುಗಳದು.

ಶಂಕರ– ಅಣ್ಣ, ಕೆಲಸಗಾರ ನೊಣಗಳು ವೈರಿಗಳು ಗೂಡಿಗೆ ಬಾರ ದಂತೆ ನೋಡಿಕೊಳ್ಳುತ್ತವೆಯೆಂದೆಯಲ್ಲ, ಜೇನುನೊಣಗ ಳಿಗೂ ವೈರಿಗಳುಂಟೆ ?

ಅಣ್ಣ – ಉಂಟು. ಜೇನುತುಪ್ಪ, ಮೇಣ, ಚಿಕ್ಕಮರಿ ಮುಂತಾದು ವನ್ನು ತಿನ್ನುವ ಕೆಲವು ಪ್ರಾಣಿಗಳಿವೆ. ಅವೇ ಜೇನುಗಳಿಗೆ ಶತ್ರುಗಳು ; ಮನುಷ್ಯನೂ ಜೇನಿಗೆ ಶತ್ರುವೇ ಅಲ್ಲವೆ ?

ಶಂಕರ– ಹೌದು. ಅವುಗಳ ತುಪ್ಪವನ್ನು ಕಿತ್ತುಕೊಂಡು ಬರು ತ್ತಾನೆ. ಆದ್ದರಿಂದ ಮನುಷ್ಯನೂ ವೈರಿಯೆ. ಮನುಷ್ಯನನ್ನು ಬಿಟ್ಟು ಉಳಿದ ಶತ್ರುಗಳಾವುವು ?

ಅಣ್ಣ – ಮೇಣದ ಚಿಟ್ಟೆ ಎಂಬ ಹುಳುವಿದೆ. ಇದು ಜೇನು ಗೂಡನ್ನು ಹೊಕ್ಕು ಅಲ್ಲಿಯೆ ಮೊಟ್ಟೆಯಿಟ್ಟು ಮರಿಮಾಡು ತ್ತದೆ. ಆ ಮರಿಗಳು ಜೇನು ಗೂಡಿನಲ್ಲಿಯೇ ಬೆಳೆದು ಅಲ್ಲಿ ರುವ ಮೇಣವನ್ನೆಲ್ಲ ತಿಂದುಬಿಡುತ್ತವೆ. ಎರಡನೆಯ ಶತ್ರು 'ಕಡಜ' ಎಂಬ ಹುಳು; ಇದು ಗೂಡಿನಲ್ಲಿರುವ ಜೇನು ಮರಿಗಳನ್ನೂ, ಜೇನು ಹುಳುಗಳನ್ನೂ ಕಚ್ಚಿ

ಕೊಂಡು ತನ್ನ ಮರಿಗಳಿಗೆ ಆಹಾರ ಮಾಡಿಕೊಂಡು ಒಯ್ಯುತ್ತದೆ. ಮೂರನೆಯ ಶತ್ರುವೆಂದರೆ ಇರುವೆಗಳು. ಇವು ಜೇನುಗೂಡನ್ನು ಹೊಕ್ಕು ಜೇನು ತುಪ್ಪವನ್ನು ಕುಡಿಯುವುವು. ಇವು ಮೂರೂ ಮುಖ್ಯವಾಗಿ ಜೇನಿನ ವೈರಿಗಳು.

ಶಂಕರ– ಮೇಣದ ಹುಳು, ಕಡಜ, ಇರುವೆ–ಇವೇ ಜೇನಿನ ಮುಖ್ಯ ಶತ್ರುಗಳೆಂದಹಾಗಾಯಿತು. ಇವು ಗೂಡಿಗೆ ಬಂದರೆ ಜೇನು ಹುಳುಗಳೇನು ಮಾಡುತ್ತವೆ ?

ಅಣ್ಣ– ನಮ್ಮ ದೇಶದ ಮೇಲೆ ವೈರಿಗಳು ಬಂದರೆ ನಾವೇನು ಮಾಡುತ್ತೇವೆ ?

ಶಂಕರ– ನಮ್ಮ ದೇಶದ ಮೇಲೆ ವೈರಿಗಳು ಬಂದರೆ ದೇಶದ ಎಲ್ಲ ಜನಗಳೂ ಒಟ್ಟಾಗಿ ಸೇರಿ, ವೈರಿಗಳನ್ನು ಹೊಡೆದು ಬಡಿದು ಓಡಿಸುತ್ತೇವೆ. ಗುಂಡುಹಾರಿಸುತ್ತೇವೆ. ಕೊಲ್ಲುತ್ತೇವೆ. ದೇಶವನ್ನು ರಕ್ಷಿಸುತ್ತೇವೆ.

ಅಣ್ಣ– ಅವೂ ಹಾಗೆಯೇ. ಅವುಗಳ ಗೂಡೇ ಅವುಗಳ ರಾಜ್ಯ. ಅದನ್ನು ಉಳಿಸಿಕೊಂಡರೆ ಅಲ್ಲಿರುವ ಎಲ್ಲ ಹುಳುಗಳಿಗೂ ಸುಖ. ಅದನ್ನು ಉಳಿಸಿಕೊಳ್ಳಲು ಕೆಲಸಗಾರ ನೊಣಗಳೆಲ್ಲ ಒಟ್ಟಿಗೆ ಸೇರಿ ಕಚ್ಚುತ್ತವೆ. ಬೆನ್ನು ಹತ್ತಿ ಅಟ್ಟಿಸಿಕೊಂಡು ಹೋಗಿ ಕಚ್ಚಿ ಕೊಲ್ಲುತ್ತವೆ. ಓಡಿಸುತ್ತವೆ. ತಮ್ಮ ಗೂಡನ್ನು ರಕ್ಷಿಸಿ ಸುಖಪಡುತ್ತವೆ.

ಶಂಕರ– ಸರಿ ಸರಿ ಯುದ್ಧವನ್ನೇ ಮಾಡುತ್ತವೆ ಎಂದಹಾಗಾಯಿತು.

ಅಣ್ಣ– ಹೌದು. ಅದು ಯುದ್ಧವೇ. ಗೂಡಿನ ರಕ್ಷಣೆಗಾಗಿ ಅವೂ ಯುದ್ಧ ಮಾಡಲೇಬೇಕಲ್ಲವೆ ! ಮನುಷ್ಯ ಹೋದರೆ ಅವನನ್ನೂ ಕಚ್ಚುತ್ತವೆ. ಬೆನ್ನುಹತ್ತಿ ಅಟ್ಟಿಸಿಕೊಂಡು

ಬಂದು ಕಚ್ಚುತ್ತವೆ. ಹೆಜ್ಜೇನು ಹುಳು ಬಹಳ ಕಚ್ಚುತ್ತದೆ. ಅದರೇನು ಪಾಪ! ತನ್ನ ರಕ್ಷಣೆಗೆ, ಗೂಡಿನ ರಕ್ಷಣೆಗೆ ವೈರಿಗಳನ್ನು ಕಚ್ಚಿ ಅದೂ ಕೂಡ ಸ್ವಲ್ಪ ಹೊತ್ತಿನಲ್ಲಿ ಸತ್ತು ಹೋಗುವುದು.

ಶಂಕರ– ವೈರಿಗಳನ್ನು ಕಚ್ಚಿದರೆ ಅದೇಕೆ ಸಾಯಬೇಕು ?

ಅಣ್ಣ– ಜೇನುನೊಣದ ಹಿಂಭಾಗದ ತುದಿಯಲ್ಲಿ ಒಂದು ತರದ ವಿಷದ ಮುಳ್ಳು ಇರುತ್ತದೆ. ಈ ಮುಳ್ಳಿನಿಂದಲೇ ಅದು ವೈರಿಯನ್ನು ಕಚ್ಚುವುದು. ಕಚ್ಚಿದಾಗ ಆ ಮುಳ್ಳು ವೈರಿಗಳ ದೇಹದಲ್ಲಿ ಚುಚ್ಚಿಕೊಳ್ಳುವುದು. ಚುಚ್ಚಿ ಆದಮೇಲೆ ಪುನಃ ಹಾರಿದಾಗ ಮುಳ್ಳು ವೈರಿಯ ಮೈಯಲ್ಲಿಯೇ ಉಳಿದುಬಿಡುವುದು. ಆ ಮುಳ್ಳಿನ ಜೊತೆಗೆ ಜೇನುನೊಣದ ಕರುಳುಕೂಡ ಕಿತ್ತು ನೋವಾಗಿ ಸತ್ತು ಹೋಗುವುದು.

ಶಂಕರ– ಆಹಾ! ಎಂಥ ತ್ಯಾಗ ನೋಡಣ್ಣ! ತನ್ನ ರಾಜ್ಯದಂತಿರುವ ಗೂಡಿನ ರಕ್ಷಣೆಮಾಡಿ ವೈರಿಯನ್ನು ಕಚ್ಚಿ ತಾನೂ ಸತ್ತುಹೋಗುವುದು. ಅಬ್ಬಾ! ಇಂಥ ಗುಣವನ್ನೇ ತ್ಯಾಗ ಗುಣ ಎನ್ನುತ್ತೇವೆ ಅಲ್ಲವೇನಣ್ಣ ?

ಅಣ್ಣ– ಇದೇ ಎಲ್ಲ ತ್ಯಾಗಗಳಿಗೂ ದೊಡ್ಡ ತ್ಯಾಗ. ರಾಜ್ಯವನ್ನು ರಕ್ಷಿಸಲು ತನ್ನ ದೇಹವನ್ನು ಲೆಕ್ಕಿಸದೆ ಸಾಯುವವರೇ ಲೋಕದಲ್ಲಿ ದೊಡ್ಡವರು.

ಶಂಕರ– ಈ ವಿಷದ ಮುಳ್ಳು ಎಲ್ಲ ನೊಣಗಳಿಗೂ ಇರುತ್ತದೆಯೆ ?

ಅಣ್ಣ- ಗಂಡುನೊಣಗಳಿಗಿರುವುದಿಲ್ಲ. ಆದ್ದರಿಂದ ಅವು ಯಾರನ್ನೂ ಕಚ್ಚುವುದಿಲ್ಲ. ರಾಣಿ ಜೇನಿಗೂ ಇರುತ್ತದೆ. ಆದರೆ ಆ ಮುಳ್ಳಿನಿಂದ ವೈರಿಗಳನ್ನು ಕಚ್ಚುವುದಿಲ್ಲ. ಇನ್ನೊಂದು ರಾಣಿಜೇನಿನೊಡನೆ ಇದಕ್ಕೆ ಯುದ್ಧಮಾಡುವ ಪ್ರಸಂಗ

ಬಂದರೆ ಈ ಮುಳ್ಳನ್ನು ಅದಕ್ಕೆ ಚುಚ್ಚಲು ಉಪಯೋಗಿಸುತ್ತದೆ. ಆದ್ದರಿಂದ ವೈರಿಗಳನ್ನು ಚುಚ್ಚಿ ಕೊಂದು ಅಥವಾ ಓಡಿಸಿ ತಾನೂ ಸಾಯುವುದು ಹೆಣ್ಣುಹುಳು ಮಾತ್ರ. ಇನ್ನೊಂದು ವಿಚಾರ ಶಂಕರ, ಜೇನುಹುಳುಗಳಿಂದ ಕಡಿಸಿಕೊಂಡರೆ ಕೆಲವು ರೋಗಗಳೂ ವಾಸಿಯಾಗುತ್ತವೆಂದು ಕೆಲವರು ಹೇಳುತ್ತಾರೆ.

೬

ಜೇನುಹುಳುಗಳ ಅದ್ಭುತವಾದ ಆಶ್ಚರ್ಯಕರವಾದ ಕಥೆಯನ್ನು ಕೇಳುತ್ತ ಕೇಳುತ್ತ ಶಂಕರ ಮೈಮರೆತುಹೋದನು. ಅವುಗಳ ಉದ್ಯೋಗ, ತ್ಯಾಗ, ಪರೋಪಕಾರಬುದ್ಧಿ ಇವೆಲ್ಲ ಗುಣಗಳೂ ಅವನ ಮನಸ್ಸಿನಲ್ಲಿ ಬಹಳ ಆಶ್ಚರ್ಯಗೊಳಿಸಿ ಸ್ವಲ್ಪಹೊತ್ತು ಸುಮ್ಮನೆ ಏನನ್ನೋ ಯೋಚಿಸುತ್ತ ಕುಳಿತುಬಿಟ್ಟನು. ಆಗ ಅವನ ಅಣ್ಣನು "ಏನು ಶಂಕರ, ಸುಮ್ಮನಾಗಿಬಿಟ್ಟೆ ? ಮನೆಗೆ ಹೋಗೋಣವೆ ?" ಎನ್ನಲು, ಶಂಕರ "ಅಣ್ಣ, ತಿಳಿಯುವುದು ಇನ್ನೂ ಬಹಳ ಇದೆ, ಜೇನು ಹುಳುಗಳು ಗೂಡನ್ನು ತಯಾರಿಸುವುದೊಂದು ಅದ್ಭುತವೇ ಆಗಿದೆ ಅದನ್ನು ತಿಳಿಸು" ಎಂದನು.

ಆಗ ಅವನು "ಹೌದು, ಆಶ್ಚರ್ಯವೇ ಸರಿ. ಮನುಷ್ಯನೂ ಅಷ್ಟೊಂದು ಚೆನ್ನಾಗಿ, ಕ್ರಮವಾಗಿ ಕಟ್ಟಲಾರನು. ಅದು ಜಕ್ಕಣಾಚಾರ್ಯ ಕಲ್ಲಿನಲ್ಲಿ ಗುಡಿ ಕಟ್ಟಿದಂತೆ. ಬುದ್ಧಿವಂತಿಕೆಯಿಂದ ಅದು ಕಟ್ಟಿದ ಗೂಡು ಒಂದು ದೊಡ್ಡ ನಗರವಿದ್ದ ಹಾಗೆ. ಕೆಲಸ–ಜೇಡರ ಹುಳು, ತನ್ನ ಮೈಯೊಳಗಿನ ಒಂದು ತರದ ಜಿಗಟು ಪದಾರ್ಥದಿಂದ ಎಳೆಯನ್ನು ಮಾಡಿ, ಬಲೆ ಕಟ್ಟುತ್ತದೆ.

ಅದಕ್ಕೆ ನಾವು "ಜೇಡನ ಬಲೆ" ಎನ್ನುತ್ತೇವೆ. ರೇಷ್ಮೆ ಹುಳುವೂ ಇದೇ ರೀತಿ ತನ್ನ ಮೈಯೊಳಗಿನ ಒಂದು ಜಿಗುಟು ಪದಾರ್ಥದಿಂದ ಎಳೆ ಎಳೆಗಳನ್ನು ಮಾಡಿ ತನ್ನ ಸುತ್ತಲೂ ಗೂಡು ಕಟ್ಟಿಕೊಳ್ಳುತ್ತದೆ, ಇದಕ್ಕೆ ರೇಷ್ಮೆ ಗೂಡು ಎನ್ನುತ್ತೇವೆ. ಇವುಗಳ ಹಾಗೆಯೆ



ಮೇಣದಿಂದ ಜೇನುಹುಳು ಕಟ್ಟಿದ ಅಂದವಾದ ಗೂಡುಗಳನ್ನು ನೋಡು

ಜೇನು ಹುಳುವೂ ತನ್ನ ಮೈಯಲ್ಲಿ ಹುಟ್ಟುವ ಒಂದು ತರದ ಜಿಗುಟು ಪದಾರ್ಥದಿಂದಲೇ ಗೂಡು ಕಟ್ಟುತ್ತದೆ. ಆ ಪದಾರ್ಥಕ್ಕೆ 'ಮೇಣ' ಎನ್ನುತ್ತೇವೆ. ಈ ಮೇಣ ಕೆಲಸಗಾರ ನೊಣಗಳ ಮಯ್ಯಲ್ಲಿ ಹುಟ್ಟುತ್ತದೆ. ಆ ನೊಣಗಳೇ ಬಹು ಚಾತುರ್ಯದಿಂದ ಈ ಗೂಡುಗಳನ್ನು ಕಟ್ಟುತ್ತವೆ. ಅವುಗಳ ದೇಹದಲ್ಲಿ ಒಂದು ತರದ ಗ್ರಂಥಿ (ಗಂಟು)ಗಳು ಇವೆ, ಆ ಗ್ರಂಥಿಗಳೇ ಈ ಮೇಣವನ್ನು ಉತ್ಪತ್ತಿ ಮಾಡುತ್ತವೆ."

ಶಂಕರ– ಆ ಗ್ರಂಥಿಗಳು ಈ ಮೇಣವನ್ನು ಹೇಗೆ ಉತ್ಪತ್ತಿ ಮಾಡುತ್ತವೆ ?

ಅಣ್ಣ – ನಿನ್ನೆದುರಿಗೆ ಒಬ್ಬ ಹುಡುಗ ಹೇಳಿಯಾದ ಮಾವಿನಕಾಯಿ ಅಥವಾ ಹುಣಿಸೇಕಾಯಿ ಅಥವಾ ಉಪ್ಪಿನಕಾಯಿ ತಿನ್ನುತ್ತಿದ್ದರೆ ನಿನ್ನ ಬಾಯಲ್ಲಿ ಏನು ಹುಟ್ಟುವುದು ಬಲ್ಲೆಯಾ ?

ಶಂಕರ– ನೀರು !

ಅಣ್ಣ – ಆ ನೀರು ಹೇಗೆ ಬರುತ್ತದೆ ?

ಶಂಕರ– ನೀರು ಹೇಗೆ ಬರುತ್ತದೆಂಬುದು ಗೊತ್ತಿಲ್ಲ, ನೀರು ಮಾತ್ರ ಬರುವುದು ಗೊತ್ತು,

ಅಣ್ಣ – ಕಪೋಲಗಳಲ್ಲಿರುವ ಒಂದು ತರದ ಗ್ರಂಥಿಗಳೇ ಆ ನೀರನ್ನು ಸುರಿಸುತ್ತವೆ. ಹಾಗೆಯೆ ಜೇನು ಹುಳುಗಳ ದೇಹದ




ಲ್ಲಿರುವ ಕೆಲವು ಗ್ರಂಥಿಗಳಿಂದಲೇ ಈ ಮೇಣದಂತೆ ಪದಾರ್ಥವು ಹುಟ್ಟಿ ಅದು ಹೊಟ್ಟೆಯ ತಳಭಾಗದಲ್ಲಿ ಬಂದು ನಿಲ್ಲುತ್ತದೆ. ಗೂಡು ಕಟ್ಟುವಾಗ ತನ್ನ ಹೊಟ್ಟೆಯ ತಳಭಾಗದಲ್ಲಿ ಬಂದು ನಿಂತ ಆ ಜಿಗಟು ಪದಾರ್ಥವನ್ನು ಕೆರೆದುಕೊಂಡು ತನ್ನ ಬಾಯೊಳಗಿನ ಜೊಲ್ಲಿನಿಂದ ಅದನ್ನು

ಮೆತ್ತಗೆ ಮಾಡಿಕೊಳ್ಳುವುದು. ಅನಂತರ ಆರಾರು ಮೂಲೆಯ ಸಾವಿರಾರು ಚಿಕ್ಕ ಚಿಕ್ಕ ಕೊಠಡಿಗಳನ್ನು ಕಟ್ಟುವುದು, ಎಲ್ಲಕ್ಕೂ ಮೇಲ್ಭಾಗದಲ್ಲಿ ತುಪ್ಪವನ್ನು ಕೂಡಿಡಲು, ಅದಕ್ಕೂ ಕೆಳಗೆ ಪರಾಗವನ್ನು ತುಂಬಿಡಲು ಅದಕ್ಕೂ ಕೆಳಭಾಗದಲ್ಲಿ ಮರಿಗಳನ್ನು ಮಾಡಲು ಗೂಡಿನ ಎರಡೂ ಮಗ್ಗಲು ಕಟ್ಟುವುದು. ಎಲ್ಲ ಹುಳುಗಳು ಸೇರಿ ಮೇಣದಿಂದ ದೊಡ್ಡ ಪಟ್ಟಣದಂಥ "ಹುಟ್ಟ"ನ್ನು ಅಥವಾ "ಅರಿ"ಯನ್ನು ಕಟ್ಟುವುದನ್ನು ನೋಡಿದರೆ, ಬಹಳ ಅದ್ಭುತ ವೆನಿಸುವುದು.

ಶಂಕರ– ಆಶ್ಚರ್ಯವಲ್ಲದೆ ಏನಣ್ಣ ! ಸ್ವಲ್ಪವೂ ಕ್ರಮ ತಪ್ಪದ ಹಾಗೆ ಆರಾರು ಮೂಲೆಯ ಆ ಪುಟ್ಟ ಪುಟ್ಟ ಮನೆಗಳು ಅದೆಷ್ಟು ಚೆಂದ ! ಅದೆಷ್ಟು ಲೆಕ್ಕಾಚಾರ ! ಅಬ್ಬಾ ! ಆಮೇಲೆ ?

ಅಣ್ಣ – ಹುಟ್ಟನ್ನು ಅಥವಾ ಅರಿಯನ್ನು ಗಿಡದ ಬೊಡ್ಡೆಗೋ, ಟೊಂಗೆಗೋ ಅಥವಾ ಸಾಕುವ ಪೆಟ್ಟಿಗೆಯಲ್ಲಿನ ಎರಡು ಬೆರಳಗಲದ ಹಲಿಗೆಗೊ ತಮ್ಮ ಮೈಯಲ್ಲಿಯೆ ಹುಟ್ಟುವ ಅಂಟಿನಂಥ ಪದಾರ್ಥದಿಂದ ತೂಗು ಹಾಕುವ ಕಾರ್ಯವನ್ನು ಕೆಲವು ಹುಳುಗಳು ಮಾಡುತ್ತಿರುತ್ತವೆ. ಕೆಲವು ಮಕರಂದ ವನ್ನೂ ಪರಾಗವನ್ನೂ ತರುತ್ತಿರುತ್ತವೆ. ಗೂಡು ಕಟ್ಟು ವಾಗ ಅವುಗಳಿಗೆ ಆಹಾರವೂ ಬಹಳ ಬೇಕು. ಬಹಳ ಶ್ರಮಪಟ್ಟು ಆ ಕಾರ್ಯವನ್ನು ಮಾಡುತ್ತವಾದ್ದರಿಂದ ಅವುಗಳ ಹೊಟ್ಟೆಯೂ ಬಹಳ ಹಸಿಯುತ್ತದೆ.

ಶಂಕರ– ನಾವೂ ಬಹಳ ಕಷ್ಟದ ಕೆಲಸ ಮಾಡಹತ್ತಿದರೆ ಹೆಚ್ಚಿಗೆ ಊಟ ಮಾಡುವುದಿಲ್ಲವೆ ? ಹಾಗೆಯೆ ಅವೂ ಕೂಡ. ಆ ಮೇಲೆ ?

ಅಣ್ಣ– ಹೀಗೆ ಅವೆಲ್ಲ ಗೂಡು ಕಟ್ಟಿ ಆದಮೇಲೆ ರಾಣಿ ಜೇನು ಆರಾರು ಮೂಲೆಯ ಪ್ರತಿಯೊಂದು ಚಿಕ್ಕ ಚಿಕ್ಕ ಗೂಡಿನಲ್ಲೂ ಒಂದೊಂದು ಮೊಟ್ಟೆಯಿಡುವುದು.

ಶಂಕರ– ತುಪ್ಪ ಮತ್ತು ಪರಾಗಗಳನ್ನು ತುಂಬುವ ಗೂಡಿನಲ್ಲೂ ಮೊಟ್ಟೆಯಿಡುವುದೆ ?

ಅಣ್ಣ– ಅಲ್ಲ, ಮರಿಗಳಿಗಾಗಿ ಕೆಳಗೆ ರೊಟ್ಟಿಯಂತಿರುವ ಅಗಲವಾದ ಭಾಗದ ಎರಡೂ ಮಗ್ಗುಲಲ್ಲಿರುವ ಗೂಡುಗಳಲ್ಲಿ ಇಡುವುದು. ಅವೇ ಮರಿಗಳು ಉತ್ಪತ್ತಿಯಾಗುವ ಕೊಠಡಿಗಳು ಅಥವಾ ಗೂಡುಗಳು.

ಶಂಕರ– ಈ ರಾಣಿಹುಳು ದಿನಾಲು ಎಷ್ಟು ಮೊಟ್ಟೆಯಿಡುವುದು?

ಅಣ್ಣ– ಆಗಲೇ ಹೇಳಿದ್ದೇನೆ; ಮೊದಮೊದಲು ದಿನವೊಂದಕ್ಕೆ ಹತ್ತು–ಹನ್ನೆರಡರಿಂದ ನೂರು ಇನ್ನೂರು ಸಾವಿರದವರೆಗೂ ಇಡುತ್ತದೆ ಎಂದು.

ಶಂಕರ– ಹೌದು ಮರೆತಿದ್ದೆ. ಅಣ್ಣ, ಮೊಟ್ಟೆಯಿಟ್ಟಮೇಲೆ ಮರಿಗಳಾಗುವ ರೀತಿಯನ್ನು ಹೇಳು.

ಅಣ್ಣ– ಇದು ತೊಡಕಿನ ವಿಚಾರ. ಈ ತೊಡಕಿನ ವಿಚಾರವನ್ನು ಲಕ್ಷ್ಯವಿಟ್ಟು ಕೇಳು. ನೀನು ಬಹು ಬುದ್ಧಿವಂತ, ತಿಳಿಯಬೇಕೆಂಬ ಆಶೆಯುಳ್ಳವ ಆದ್ದರಿಂದಲೇ ಇಷ್ಟು ಪ್ರಶ್ನೆ ಕೇಳುತ್ತೀಯೆ. ಪ್ರಶ್ನೆಗಳನ್ನು ಹೆಚ್ಚು ಹೆಚ್ಚಾಗಿ ಕೇಳಿ ತಿಳಿಯುವ ಮಕ್ಕಳೆಲ್ಲ ಬುದ್ಧಿವಂತರು.

೭

ಶಂಕರ, ಜೇನು ಹುಳುಗಳಲ್ಲಿ ರಾಣಿಜೇನು, ಗಂಡುಜೇನು, ಕೆಲಸಗಾರ ಜೇನು ಹುಳುಗಳೆಂದನಲ್ಲವೆ. ಈ ಮೂರು ಜಾತಿಯ ಮರಿಗಳೂ ಒಂದೇ ಅವಧಿಯಲ್ಲಿ ಮರಿಗಳಾಗಿ ಹೊರಗೆ ಬರು

ವುದಿಲ್ಲ. ಅವುಗಳು, ರಾಣಿ ಜೇನುಹುಳುವಿಟ್ಟ ಮೊಟ್ಟೆಯಿಂದ ಮರಿಗಳಾಗಿ ಹಾರಿ ಹೊರಗೆ ಬರಲು ಬೇರೆ ಬೇರೆ ಅವಧಿಗಳು ಬೇಕು. ಮುತ್ತಿನಂತೆ ಬೆಳ್ಳಗಿರುವ ಚಿಕ್ಕ ಮೊಟ್ಟೆಯು ಇಟ್ಟ ಮೂರು ದಿನಗಳ ನಂತರ ಒಡೆದು ಸಣ್ಣ ಮರಿಯಾಗಿ ೧೫–೧೬ ದಿನಗಳಿಗೆ ರೆಕ್ಕೆ ಬಲಿತು ಗೂಡು ಬಿಟ್ಟು ಹೊರಗೆ ರಾಣಿ ಜೇನುಹುಳು ಬರುವುದು.

ಹೆಣ್ಣು ಹುಳುಗಳು ಅಂದರೆ ಕೆಲಸಗಾರ ಹುಳುಗಳು ಮೊಟ್ಟೆಯಿಟ್ಟ ಮೂರು ದಿನಗಳ ಮೇಲೆ ಮೊಟ್ಟೆಯೊಡೆದು



ಜೇನಿನ ಮೊಟ್ಟೆ ಅಥವಾ ತತ್ತಿ




ಮೊಟ್ಟೆಯೊಡೆದು ಮರಿಯಾಗಿದೆ




ತನ್ನ ಸುತ್ತ ಪೊರೆ ಸುತ್ತಿಕೊಂಡು ನಿದ್ರಿಸುತ್ತಿದೆ.

ಸಣ್ಣ ಮರಿಗಳಾಗಿ ಮೂರುವಾರ ಅವಧಿಯಲ್ಲಿ ರೆಕ್ಕೆ ಬಲಿತು ಗೂಡು ಬಿಟ್ಟು ಹೊರಗೆ ಬರುವುವು. ಗಂಡು ನೊಣ ಮೊಟ್ಟೆಯಿಟ್ಟು ಮೂರು ದಿನಗಳಲ್ಲಿ ಮರಿಯಾಗಿ ಅನಂತರ ೨೪ ದಿನಗಳ

ಅವಧಿಯಲ್ಲಿ ಬಲಿತು, ರೆಕ್ಕೆ ಹೊಡೆದುಕೊಂಡು ಗೂಡುಬಿಟ್ಟು ಹಾರಿ ಹೊರಗೆ ಬರುವುದು.

ಶಂಕರ– ಓಹೋ ! ಚೆನ್ನಾಗಿದೆ. ಮೊಟ್ಟೆಯಿಟ್ಟ ಮೇಲೆ ರಾಣಿ ಹುಳು ೧೫–೧೬ ದಿನಕ್ಕೆ ಹೊರಗೆ ಬರುತ್ತದೆ. ಹೆಣ್ಣು ಹುಳು ೨೧ ದಿನಕ್ಕೆ ಬರುತ್ತದೆ. ಗಂಡುಹುಳು ೨೪ ದಿನಕ್ಕೆ ಬರುತ್ತದೆ ಎಂದ ಹಾಗಾಯಿತು. ಆಮೇಲೆ ಅವೂ ಕೆಲಸ ಮಾಡಲು ಸಿದ್ಧವಾಗುತ್ತವೆ ಎಂದ ಹಾಗಾಯಿತು.



ಕಾಲು, ಮೀಸೆ, ರೆಕ್ಕೆ ಹುಟ್ಟುತ್ತಿವೆ




ಬಲಿತ ಅಂಗಾಂಗಗಳು




ಹಾರಿ ಹೊರಗೆ ಬಂದ ಹುಳು

ಅಣ್ಣ– ಅವು ಒಮ್ಮೆಲೆ ಕೆಲಸಕ್ಕೆ ಸಿದ್ಧವಾಗುವುದಿಲ್ಲ. ಹಿರಿಯ ಜೇನು ಹುಳುಗಳು ಮಾಡುವ ಕೆಲಸವನ್ನು ನೋಡುತ್ತವೆ.

ಕೆಲಸ ಕಲಿಯುತ್ತವೆ. ಆಮೇಲೆ ಕೆಲಸಕ್ಕೆ ಸಿದ್ಧವಾಗುತ್ತವೆ. ಕೆಲಸಗಾರ ಹುಳುಗಳಾಗಿ ಹೊರಗೆ ಬಂದ ಮರಿಗಳು ಮೊದ ಮೊದಲು ಗೂಡನ್ನು ಸ್ವಚ್ಛವಾಗಿಡುವುದು. ಮಕರಂದವನ್ನೂ ಪರಾಗವನ್ನೂ ತಂದ ದೊಡ್ಡ ಹುಳುಗಳ ಮೈಗೆ ಅಂಟಿದ್ದ ಧೂಳನ್ನು ತಮ್ಮ ದಾಡೆಗಳಿಂದ ಸ್ವಚ್ಛಮಾಡುವುದು. ವೈರಿಗಳು ಗೂಡಿಗೆ ಬಾರದಂತೆ ರಕ್ಷಣೆಯ ಕೆಲಸಮಾಡುವುದು, ಹಾಗೇನಾದರೂ ವೈರಿಗಳು ಬಂದರೆ, ರೆಕ್ಕೆ ಬಡಿದು ಸಪ್ಪಳಮಾಡಿ ಎಚ್ಚರಿಕೆ ಕೊಡುವುದು, ಆಮೇಲೆ ಗೂಡುಕಟ್ಟುವುದು, ಮಕರಂದ ತರುವುದು ಹೀಗೆ ಕ್ರಮೇಣ ಕೆಲಸಗಳನ್ನು ಕಲಿತು ತಾವೂ ಕೆಲಸಗಾರ ಜೇನು ಹುಳುಗಳಾಗುತ್ತವೆ. ಹೊಸ ಹುಳುಗಳು ಗೂಡು ಕಟ್ಟಿದಮೇಲೆ ಹೊಸ ರಾಣಿಜೇನು ಮೊಟ್ಟೆಯಿಡತೊಡಗುತ್ತದೆ.

ಶಂಕರ– ಅವುಗಳಿಗೆ ಕೆಲಸ ಮಾಡುವುದನ್ನು ಯಾರಾದರೂ ಕಲಿಸುತ್ತಾರೆಯೆ ?

ಅಣ್ಣ– ಅಲ್ಲೇನು ಶಾಲೆಯುಂಟೆ ? ಏನೂ ಇಲ್ಲ. ದೇವರು ಅವಕ್ಕೆ ಉಂಟುಮಾಡಿದ ಸ್ವಭಾವವೇ ಅದು. ದೊಡ್ಡ ಹುಳುಗಳು ಮಾಡುವ ಕೆಲಸವನ್ನು ನೋಡುತ್ತವೆ. ಆಮೇಲೆ ತಾವು ಮಾಡುತ್ತವೆ. ತಮ್ಮ ತಮ್ಮ ಸ್ವಭಾವಕ್ಕನುಗುಣವಾಗಿ ಸೃಷ್ಟಿಯಲ್ಲಿ ಎಲ್ಲ ಪ್ರಾಣಿಗಳೂ ಕೆಲಸ ಮಾಡುತ್ತವೆ. ಮೊದಮೊದಲು ಸಮೀಪದಲ್ಲಿರುವ ಹೂವುಗಳಿಗೆ ಹೋಗಿ ಮಕರಂದವನ್ನು ಪುಷ್ಪದ ಧೂಳನ್ನು ತರುತ್ತವೆ. ಅನಂತರ ದೂರದ ಹೂಗಳಿಗೆ ಹೋಗುತ್ತವೆ.

ಶಂಕರ– ಮೊಟ್ಟೆಯಿಂದ ಮರಿಯಾಗುವ ರೀತಿ ಸರಿಯಾಗಿ ಅರ್ಥವಾಗಲಿಲ್ಲ. ಆ ರೀತಿಯನ್ನು ಇನ್ನೂ ಸರಿಯಾಗಿ ವಿವರಿಸಿದರೆ ನನಗೆ ಚೆನ್ನಾಗಿ ತಿಳಿಯುತ್ತದೆ.

ಅಣ್ಣ– ಒಂದೊಂದಾಗಿ ಕೇಳು: ರಾಣಿಹುಳುವಾಗುವ ಮೊಟ್ಟೆ ಮೂರು ದಿನಕ್ಕೆ ಒಡೆದು ಶಾವಿಗೆ ಎಳೆಯಂತೆ ಚಿಕ್ಕ ಮರಿಯಾಗುವುದು. ಈ ಮರಿಗೆ ಕೆಲಸಗಾರ ನೊಣಗಳು ತಮ್ಮ ತಲೆಯಲ್ಲಿ ಹುಟ್ಟುವ ಹಾಲಿನಂಥ ಒಂದು ತರದ ಜೊಲ್ಲನ್ನು ತಿನ್ನಿಸುವವು. ಹಾಲಿನಂಥ ಜೊಲ್ಲನ್ನು ಆರು ದಿನಗಳವರೆಗೆ ತಿನ್ನಿಸಿದ ಮೇಲೆ ಇವು ಬೆಳೆದು ಬೆಳ್ಳಗೆ ದಪ್ಪನಾಗಿಬಿಡುತ್ತವೆ. ಹೀಗೆ ಬೆಳೆದು ದಪ್ಪನಾದ ಈ ಹುಳು ತನ್ನ ಸುತ್ತಲೂ ತೆಳುವಾದ ಅತಿ ಸೂಕ್ಷ್ಮವಾದ ಎಳೆಗಳಿಂದ ಪೊರೆ ಕಟ್ಟಿಕೊಂಡುಬಿಡುವುದು. ಅಂದರೆ ರೇಷ್ಮೆ ಹುಳು ಸೂಕ್ಷ್ಮವಾದ ಎಳೆಗಳಿಂದ ತನ್ನ ಸುತ್ತಲೂ ಗೂಡು ಕಟ್ಟಿಕೊಳ್ಳುವುದಿಲ್ಲವೆ ಹಾಗೆ ಈ ಹುಳುವೂ ತನ್ನ ಸುತ್ತ ಒಂದು ಗೂಡು ಕಟ್ಟಿಕೊಳ್ಳುವುದು. ಆ ಗೂಡಿನೊಳಗೆ ಎರಡು ದಿನ ಅಲುಗಾಡದೆ ಪೂರ್ಣ ನಿದ್ರೆಯಲ್ಲಿದ್ದ ಹಾಗೆ ಇದ್ದುಬಿಡುವುದು. ಹೀಗೆ ನಿದ್ರೆಯಲ್ಲಿದ್ದ ಕಾಲದಲ್ಲಿಯೇ ಅದರ ರೆಕ್ಕೆ, ಕಾಲು, ಮೀಸೆ ಮುಂತಾದವು ಹುಟ್ಟಿಕೊಳ್ಳುವುವು. ಅನಂತರ ಕ್ರಮವಾಗಿ ಬೆಳೆದು ತನ್ನ ಸುತ್ತಲೂ ಇರುವ ಪೊರೆಯನ್ನು ಒಡೆದು ನಾಲ್ಕೈದು ದಿನಕ್ಕೆ ಹೊರಗೆ ಬರುವುದು.

ಶಂಕರ– ಅಬ್ಬಾ! ವಿಚಿತ್ರವಾಗಿದೆ ದೇವರ ಸೃಷ್ಟಿ. ಮೂರು ದಿನ ಮೊಟ್ಟೆಯಾಗಿದ್ದು, ಆರು ದಿನ ಮರಿಯಾಗಿದ್ದು,

ಎರಡು ದಿನ ನಿದ್ರೆಯಲ್ಲಿದ್ದು ರೆಕ್ಕೆ, ಮೀಸೆ, ಕಾಲುಗಳನ್ನು ಹೊಂದಿ, ೪-೫ ದಿನಕ್ಕೆ ಬಲಿತು ಹೊರಗೆ ರಾಣಿಯಾಗಿ ಬರುತ್ತದೆ. ಸರಿ ಇನ್ನು ಕೆಲಸಗಾರ ನೊಣಗಳ ವಿಚಾರ ಹೇಳು.

ಅಣ್ಣ – ಇಲ್ಲಿಯೆ ವಿಚಿತ್ರವಿರುವುದು.

ಶಂಕರ– ಏನು ವಿಚಿತ್ರವಿದೆ ?

ಅಣ್ಣ – ಶಂಕರ, ಯಾವ ಮೊಟ್ಟೆಯೊಡೆದು ಮರಿಯಾಗಿ ರಾಣಿ ಹುಳುವಾಯಿತೊ ಅವೇ ಮೊಟ್ಟೆಗಳು ಮೂರು ದಿನಗಳಾದ ಮೇಲೆ ಒಡೆದು ಚಿಕ್ಕ ಮರಿಯಾಗುವುವು. ಹೆಣ್ಣು ನೊಣಗಳ ತಮ್ಮ ತಲೆಯಲ್ಲಿ ಹುಟ್ಟುವ ಹಾಲಿನಂಥ ಜೊಲ್ಲನ್ನು ಮೂರು ದಿನ ಮಾತ್ರ ತಿನ್ನಿಸುವುವು ನಾಲ್ಕನೆಯ ದಿನದಿಂದ ತುಪ್ಪ ಮತ್ತು ಪರಾಗಗಳನ್ನು ಕಲಸಿ ತಿನ್ನಿಸುವವು. ಆ ಮೇಲೆ ಈ ಹುಳುವೂ ತನ್ನ ಸುತ್ತ ಸೂಕ್ಷ್ಮವಾದ ಗೂಡನ್ನು ಎಳೆಗಳಿಂದ ಕಟ್ಟಿಕೊಂಡು ಮೂರು ದಿನ ಪೂರ್ಣ ನಿದ್ರೆಯಲ್ಲಿದ್ದ ಹಾಗೆ ಅಲುಗಾಡದೆ ಇದ್ದುಬಿಡುವುದು. ಈ ಕಾಲದಲ್ಲಿಯೇ ಇದಕ್ಕೂ, ಕಾಲು, ಮೀಸೆ, ರೆಕ್ಕೆ ಮೊದಲಾದ ಅಂಗಗಳಾಗುವುವು. ಆಮೇಲೆ ಕ್ರಮೇಣ ಈ ಅಂಗಗಳೆಲ್ಲ ೧೨ ದಿನಗಳ ಅವಧಿಯಲ್ಲಿ ಬಲಿಯುವುವು. ಅನಂತರ ಗೂಡುಬಿಟ್ಟು ಹಾರಿ ಹೊರಗೆ ಬರುವುದು. ಒಟ್ಟು ೨೧ ದಿನಕ್ಕೆ ಹೊರಗೆ ಬಂದ ಹಾಗಾಯಿತು.

ಶಂಕರ– ಕೆಲಸಗಾರ ಹುಳುಗಳಾಗಿ ಹೊರಗೆಬರುವ ರೀತಿಯೂ ಒಂದುತರದ ಅದ್ಭುತವೇ ಸರಿ. ಇನ್ನು ಗಂಡುಹುಳುಗಳಾಗಿ ಬರುವರೀತಿ ಹೇಗೆ ?

ಅಣ್ಣ– ಇಲ್ಲಿ ಸ್ವಲ್ಪ ಬದಲಾವಣೆಯುಂಟು. ರಾಣಿಜೇನು ಹುಳುವಾಗುವ ಮೊಟ್ಟೆ, ಕೆಲಸಗಾರಜೇನು ಹುಳುವಾಗುವ

ಮೊಟ್ಟೆ ಎರಡೂ ಒಂದೆ. ಆದರೆ ಹೆಣ್ಣು ಹುಳುಗಳು ತಮ್ಮ ತಲೆಯಲ್ಲಿ ಹುಟ್ಟುವ ಹಾಲಿನಂಥ ಜೊಲ್ಲನ್ನು ಆಹಾರವಾಗಿ ಕೊಡುವ ರೀತಿಯಿಂದ ಬೇರೆ ಬೇರೆ ಹುಳುಗಳಾಡವು. ಆದರೆ ಗಂಡು ನೊಣಗಳಾಗುವ ಮೊಟ್ಟೆ ಬೇರೆ ರೀತಿಯುವು. ಅಂದರೆ ಗಂಡು ಹೆಣ್ಣುಗಳ ಸಂಪರ್ಕವಿಲ್ಲದೆ ಇಟ್ಟ ಮೊಟ್ಟೆಗಳು. ಈ ಮೊಟ್ಟೆಗಳು ಮೂರು ದಿನಕ್ಕೆ ಒಡೆದು ಮರಿಯಾಗುವುವು. ಮೂರು ದಿನ ಈ ಮರಿಗಳಿಗೂ ಹೆಣ್ಣು ಹುಳು ತನ್ನ ತಲೆಯಲ್ಲಿ ಹುಟ್ಟುವ ಜೊಲ್ಲನ್ನು ತಿನ್ನಿಸುವುವು, ನಾಲ್ಕನೆಯ ದಿನಕ್ಕೆ ಇದಕ್ಕೊ ತುಪ್ಪ ಪರಾಗಗಳನ್ನು ಕಲಸಿ ತಿನ್ನಿಸುವುವು. ಆಮೇಲೆ ಇದೂ ಕೂಡ ನಾಲ್ಕೈದು ದಿನ ಗೂಡಿನೊಳಗೆ ಪೂರ್ಣ ನಿದ್ರೆಯಲ್ಲಿದ್ದು ಅಂಗಾಂಗಗಳನ್ನು ಪಡೆಯುವುದು. ಇಪ್ಪತ್ತು ನಾಲ್ಕನೆಯ ದಿನಕ್ಕೆ ಗೂಡು ಬಿಟ್ಟು ರೆಕ್ಕೆ ಹೊಡೆದುಕೊಂಡು ಸುಂದರ ಬಣ್ಣದ ಚಿಟ್ಟೆಯಾಗುವುದು. ಹೀಗೆ ಮೊಟ್ಟೆಯಿಟ್ಟ ಮೇಲೆ ೧೫ ದಿನಕ್ಕೆ ರಾಣಿ ಹುಳುವೂ, ೨೧ ದಿನಕ್ಕೆ ಕೆಲಸಗಾರ ಹುಳುವೂ, ೨೪ದಿನಕ್ಕೆ ಗಂಡು ಹುಳುವೂ ಗೂಡಿನಲ್ಲಿ ಹುಟ್ಟಿ ಬೇರೊಂದು ಹೊಸ ಸಂಸಾರವೇ ಹೊರಬರುವುದು.

ಶಂಕರ– ರಾಣಿ ಜೇನುಹುಳುಗಳು ಎಷ್ಟು ಹುಟ್ಟಿಕೊಳ್ಳುತ್ತವೆ ?

ಅಣ್ಣ – ಒಂದು ಸಂಸಾರದಲ್ಲಿ ನಾಲ್ಕೊ, ಐದೊ ಹುಟ್ಟಬಹುದು. ಒಮ್ಮೊಮ್ಮೆ ಹತ್ತು ಹನ್ನೆರಡೂ ಹುಟ್ಟಬಹುದು. ಒಂದು ರಾಣಿಜೇನು ಮೊಟ್ಟೆಯಿಟ್ಟು ತಾಯಿಯೆನಿಸಿಕೊಳ್ಳಹತ್ತಿದಾಗ ಉಳಿದ ರಾಣಿಹುಳುಗಳ ಉಪಯೋಗ ಇಲ್ಲದಾಗು

ವುದು. ಆಗ ಉಳಿದ ಹುಳುಗಳು ಹೆಚ್ಚಿನ ರಾಣಿಜೇನು ಹುಳುಗಳನ್ನು ಗೂಡಿನಿಂದ ಓಡಿಸಿಬಿಡುತ್ತವೆ. ಕಚ್ಚಿ ಕೊಂದುಹಾಕುವುದೂ ಉಂಟು. ಅಂತೂ ಒಂದು ಗೂಡಿಗೆ ಒಂದೇ ರಾಣಿಹುಳು ಯಜಮಾನಿಕೆ ಮಾಡಬೇಕು. ಹಲವಾರು ರಾಣಿ ಹುಳುಗಳ ಯಜಮಾನಿಕೆಯಾದರೆ ಜೇನಿನ ಸಂಸಾರವೂ ಕೆಡುತ್ತದೆ.

೮

ಮೊಟ್ಟೆಗಳು ಮರಿಗಳಾಗುವ ಆಶ್ಚರ್ಯದ ಜೇನಿನ ಕಥೆಯನ್ನು ಶಂಕರ ಕೇಳಿ ಸಂತೋಷಗೊಂಡನು. ತನ್ನ ಪುಸ್ತಕದಲ್ಲಿ ಎಲ್ಲ ವಿಷಯಗಳನ್ನೂ ಟಿಪ್ಪಣಿ ಮಾಡಿಕೊಂಡನು. ಅವನಿಗೆ ತಿಳಿಯಬೇಕೆಂಬ ಆಸೆ ಇನ್ನೂ ಹೆಚ್ಚಾಯಿತು. ಆಗ ಅಣ್ಣನನ್ನು ಕುರಿತು "ಅಣ್ಣ, ಇಲ್ಲಿ ಇನ್ನೊಂದು ವಿಚಾರ. ಪ್ರತಿವರ್ಷ ಮರಿಗಳು ಹೀಗೆ ಹೆಚ್ಚಾಗುತ್ತ ಹೋದರೆ ಜೇನಿನ ಬಹುದೊಡ್ಡ ಸಂಸಾರವಾಗುವುದಲ್ಲ ?

ಅಣ್ಣ– ದೊಡ್ಡ ಹಿಂಡಾಗಿರಲು ಅವೂ ಒಪ್ಪುವುದಿಲ್ಲ.

ಶಂಕರ– ಅಂದರೆ ಸ್ವತಂತ್ರವಾಗಿಬಿಡುತ್ತವೆಯೆ ?

ಅಣ್ಣ– ಹೌದು, ಸ್ವತಂತ್ರವೆಂಬುದು ಎಲ್ಲ ಪ್ರಾಣಿಗಳಿಗೂ ದೇವರು ಕೊಟ್ಟ ಒಂದು ವರ. ಅದು ಹುಟ್ಟು ಗುಣ. ಗುಬ್ಬಿಗಳು ಮೊಟ್ಟೆಯಿಡುತ್ತವೆ, ಮೊಟ್ಟೆಗಳು ಮರಿಯಾಗುತ್ತವೆ. ಬೆಳೆಯುತ್ತವೆ. ಹಾರಲಿಕ್ಕೆ, ಆಹಾರ ಸಂಪಾದಿಸುವುದಕ್ಕೆ ಸಿದ್ಧವಾದ ಮೇಲೆ ತಂದೆ ತಾಯಿಗಳನ್ನು ಬಿಟ್ಟು ಬೇರೆ ಗೂಡು ಕಟ್ಟುತ್ತವೆ. ಜೇನಿನ

ಸಂಸಾರದಲ್ಲೂ ಹಾಗೆಯೆ. ಹೊಸ ರಾಣಿಜೇನು ಹುಟ್ಟಿಕೊಂಡ ಮೇಲೆ ಹಳೆಯ ರಾಣಿಜೇನು ಸಾವಿರಾರು ಕೆಲಸಗಾರ ಜೇನು, ಗಂಡು ಜೇನುಗಳನ್ನು ಕೂಡಿಕೊಂಡು ಹೊಸ ಸಂಸಾರ ಹೂಡಿಬಿಡುವುದು. ಹೆಜ್ಜೇನು ಗೂಡಿನಲ್ಲಿ ಮಾತ್ರ ಸುಮಾರು ಇಪ್ಪತ್ತು ಇಪ್ಪತ್ತೈದು ಸಾವಿರ ಹುಳುಗಳು ಕೂಡಿ ಒಟ್ಟಿಗೆ ಬಾಳುವುದುಂಟು. ಆದರೆ ಕೋಲು ಜೇನು, ತುಡುವಿಜೇನುಗಳಲ್ಲಿ ಇಷ್ಟು ದೊಡ್ಡ ಸಂಸಾರವಾಗಲಿಕ್ಕೆ ಅವಕಾಶವಿಲ್ಲ. ಅವು ಬೇಗ ಸ್ವತಂತ್ರವಾಗಿಬಿಡುತ್ತವೆ.

ಶಂಕರ– ಅಣ್ಣ ಹೆಜ್ಜೇನಿನ ತುಪ್ಪ ಬಹು ರುಚಿಯಾಗಿರುತ್ತದೆಯೆ?

ಅಣ್ಣ– ಎಲ್ಲ ಜೇನುಗಳ ತುಪ್ಪವೂ ರುಚಿಯಾಗಿಯೇ ಇರುತ್ತದೆ.

ಶಂಕರ– "ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ" ಎಂದು ಸರ್ವಜ್ಞ ಕವಿ ಹಾಡಿದ್ದಾನಲ್ಲ! ಅದಕ್ಕಾಗಿ ಕೇಳಿದೆ.

ಅಣ್ಣ– ಓಹೊ! ಅದಕ್ಕಾಗಿ ಹೀಗೆ ಕೇಳಿದೆಯಾ? ಅಲ್ಲಿ ಪ್ರಾಸಕ್ಕಾಗಿ "ಹೆಜ್ಜೇನು" ಎಂದಿದ್ದಾನೆ. "ದುರ್ಜನ ಸಜ್ಜನ" ಎಂಬ ಶಬ್ದಕ್ಕೆ ಹೊಂದಿಕೆಯಾಗುವ "ಹೆಜ್ಜೇನು ಸವಿದಂತೆ" ಎಂಬ ಶಬ್ದವನ್ನು ಹಾಕಿದ್ದಾನೆ ಅಷ್ಟೆ. ಎಲ್ಲ ಜೇನಿನ ತುಪ್ಪವೂ ಸಿಹಿಯೆ ಆಗಿರುತ್ತದೆ.

ಶಂಕರ– ಅಣ್ಣ, ಇನ್ನೊಂದು ವಿಚಾರ ಕೇಳುವುದನ್ನು ಮರೆತಿದ್ದೆ.

ಅಣ್ಣ– ಅದೇನು ಕೇಳು ? ನಿನಗೆ ಏನು ಕೇಳಬೇಕೆಂಬಾಸೆಯಿದೆಯೊ ಎಲ್ಲವನ್ನೂ ಕೇಳು ?

ಶಂಕರ– ಜೇನು ಗೂಡು ಮಳೆಗಾಲದಲ್ಲಿ ತೊಯ್ದು ಹಾಳಾಗುವುದಿಲ್ಲವೆ? ಚಳಿಗಾಲದಲ್ಲಿ ಚಳಿಯಿಂದ ಹುಳುಗಳು ನಡುಗುವು

ದಿಲ್ಲವೆ ? ಅವಕ್ಕೇನು ಹೊದ್ದುಕೊಳ್ಳುವುದಕ್ಕುಂಟೆ ? ಪಾಪ !

ಅಣ್ಣ– ಶಂಕರ, ಜೇನು ಹುಳುಗಳು ತಮ್ಮ ಗೂಡು ಮಳೆಗಾಲದಲ್ಲಿ ನೀರಿನಿಂದ ತೊಯ್ದು ಮರಿಗಳೂ ರಾಣಿಜೇನು ಹುಳುವೂ, ಜೇನು ತುಪ್ಪವೂ ಹಾಳಾಗದ ಹಾಗೆ ನೋಡಿ



ಚಳಿಗಾಲ ಮಳೆಗಾಲಗಳಲ್ಲಿ ಒತ್ತೊತ್ತಾಗಿ ಕುಳಿತು ಚಳಿ ಮಳೆಗಳಾಗದಂತೆ ನೋಡಿಕೊಳ್ಳುತ್ತವೆ.

ಕೊಳ್ಳುತ್ತವೆ. ಚಳಿಗಾಲದಲ್ಲಿ ಚಳಿಯಿಂದ ನಡುಗಿ ಸಾಯದ ಹಾಗೆ ಮಾಡುತ್ತವೆ. ಬೇಸಿಗೆಯಲ್ಲಿ ಸೆಕೆಯಾಗದ ಹಾಗೂ ನೋಡಿಕೊಳ್ಳುತ್ತವೆ. ಕಾಲಕ್ಕೆ ಸರಿಯಾಗಿ ತನ್ನ ರಕ್ಷಣೆ

ಮಾಡಿಕೊಳ್ಳುವ ಸ್ವಭಾವವನ್ನು ದೇವರು ಉಂಟುಮಾಡಿದ್ದಾನೆ.

ಶಂಕರ– ಹೇಗೆ ಎಂದೇ ಕೇಳಿದ್ದಣ್ಣ.

ಅಣ್ಣ– ಮಳೆಗಾಲದಲ್ಲೂ ಚಳಿಗಾಲದಲ್ಲೂ ಗಂಡು ಹುಳುಗಳೂ ಹೆಣ್ಣು ಹುಳುಗಳೂ ಒತ್ತೊತ್ತಾಗಿ ಕುಳಿತುಕೊಳ್ಳುತ್ತವೆ. ಹಾಗೆ ಕುಳಿತುಕೊಂಡು ಒಂದು ತೊಟ್ಟು ನೀರೂ ಒಳಗೆ ಹೋಗದಂತೆ ಮತ್ತು ಚಳಿಯಾಗದಂತ ಗೂಡನ್ನು ರಕ್ಷಿಸುತ್ತವೆ. ಮರಿಯನ್ನು ಕಾಪಾಡುತ್ತವೆ. ರಾಣಿಯನ್ನು ರಕ್ಷಿಸುತ್ತವೆ. ಇದರಂತೆ ಬೇಸಿಗೆಯಲ್ಲಿ ಸೆಕೆಯಾಗದ ಹಾಗೆ ಬಿಡಿ ಬಿಡಿಯಾಗಿ ಕುಳಿತು ಗಾಳಿ ಬರುವಂತೆ ನೋಡಿಕೊಳ್ಳುತ್ತವೆ. ಅಲ್ಲದೆ ಮರಿಗಳಿರುವ ಗೂಡಿನ ಬಾಗಿಲ ಬಳಿ ಕುಳಿತು ರೆಕ್ಕೆಗಳಿಂದ ಗಾಳಿ ಬೀಸುತ್ತವೆ. ಇದೂ ಅಲ್ಲದೆ ಸೆಕೆ ಹೆಚ್ಚಾದರೆ ನೀರಿದ್ದಲ್ಲಿ ಹೋಗಿ ನೀರನ್ನು ಕುಡಿದು ತಂದು ಗೂಡುಗಳಲ್ಲಿ ಸಿಂಪಡಿಸಿ ತಣ್ಣಗೆ ಮಾಡುತ್ತವೆ.

ಜೇನು ಹುಳುಗಳಲ್ಲಿರುವ ಉತ್ಕೃಷ್ಟವಾದ ಗುಣಗಳನ್ನು ಮನುಷ್ಯನು ಕಲಿತರೆ ದೊಡ್ಡವನಾದಾನು. ತ್ಯಾಗ, ಸಹಕಾರ ಜೀವನ, ಸಂಘಜೀವನ, ಚುರುಕು ಬುದ್ಧಿ, ಸತತವೂ ಉದ್ಯೋಗ ಮಾಡುವಿಕೆ, ಸೇವೆಮಾಡುವಿಕೆ ಇವೆಲ್ಲ ಗುಣಗಳನ್ನು ಮನುಷ್ಯ ಜೇನಿನಿಂದ ಕಲಿತುಕೊಳ್ಳಬೇಕು.

ಶಂಕರ– ಅಣ್ಣ, ಇಷ್ಟೆಲ್ಲ ಕಷ್ಟಪಟ್ಟು ಜೇನು ತನಗಾಗಿ ಕೂಡಿಟ್ಟ ತುಪ್ಪವನ್ನು ನಾವು ತಂದು ತಿನ್ನುತ್ತೇವಲ್ಲ ಇದು ನ್ಯಾಯವೆ?

ಅಣ್ಣ– ತಮ್ಮಾ, ಜೇನುತುಪ್ಪ ಮನುಷ್ಯನಿಗೆ ಒಳ್ಳೆಯ ಆಹಾರ. ಸಾವಿರಾರು ವರ್ಷಗಳಿಂದ ಮನುಷ್ಯ ಇದನ್ನು ತೆಗೆದು

ಕೊಂಡು ಬಂದು ತಿನ್ನುತ್ತ ಸುಖಪಡೆಯುತ್ತ ಬಂದಿದ್ದಾನೆ. ಮನುಷ್ಯನೇ ಹೀಗೆ ; ತನಗೆ ಒಳ್ಳೆಯದಾಗುವ ವಸ್ತು ಯಾವುದೊ ಅದನ್ನು ಪಡೆದು ಲಾಭ ಪಡೆಯುತ್ತಾನೆ. ಆದರೆ ಹುಳುಗಳಿಗೆ ತೊಂದರೆಯಾಗದ ಹಾಗೆ, ಮರಿಗಳಿಗೆ ಅನಾನುಕೂಲವಾಗದ ಹಾಗೆ ತುಪ್ಪವನ್ನು ಬಳಿದುಕೊಂಡು ಬರುತ್ತಾನೆ. ಜೇನು ಸಾಕುವವರು ತುಪ್ಪವನ್ನು ಬಳಿದು ಕೊಂಡು ಬರುವುದಷ್ಟೇ ಅಲ್ಲ ; ಅವು ಪುನಃ ತುಪ್ಪವನ್ನು ಹೆಚ್ಚು ಹೆಚ್ಚಾಗಿ ಮಾಡುವಂತೆ ಹೂವಿನ ಗಿಡಗಳನ್ನು ಬೆಳಸಿ ಹೂವರಳುವಂತೆ ಮಾಡುತ್ತಾನೆ. ಹೀಗೆ ಮಾಡಿ ತಾನೂ ಲಾಭಮಾಡಿಕೊಳ್ಳುತ್ತಾನೆ. ಅವುಗಳಿಗೂ ಲಾಭ ಮಾಡು ತ್ತಾನೆ. ಶಂಕರ, ಇನ್ನೊಂದು ವಿಚಾರ :

ಶಂಕರ– ಅದೇನು ?

ಅಣ್ಣ– ಎಮ್ಮೆ, ಹಸು ಮತ್ತು ಮೇಕೆಗಳ ಮೊಲೆಯಲ್ಲಿ ಹಾಲಿರು ವುದು ಯಾರಿಗಾಗಿ ?

ಶಂಕರ– ನಮಗಾಗಿ.

ಅಣ್ಣ– ಅಲ್ಲ, ಅವುಗಳ ಮೊಲೆಯಲ್ಲಿ ಹಾಲಿರುವುದು ಅವುಗಳ ಮರಿಗಳಿಗಾಗಿ. ಆದರೆ ಕರುಗಳಿಗೆ ತೊಂದರೆಯಾಗದ ಹಾಗೆ ನಾವೂ ಸ್ವಲ್ಪ ಕರೆದುಕೊಂಡು ಹಾಲು, ಮೊಸರು, ಮಜ್ಜಿಗೆ, ಬೆಣ್ಣೆಗಳನ್ನು ಮಾಡಿಕೊಂಡು ಉಪಯೋಗಿಸಿ ಸುಖಪಡುತ್ತೇವೆ. ಇದೂ ಅಲ್ಲದೆ ಎಮ್ಮೆ ಹಸುಗಳ ಮೊಲೆಯಲ್ಲಿ ಇನ್ನೂ ಹಾಲು ಹೆಚ್ಚು ಹೆಚ್ಚಾಗಿ ಬರುವಂತೆ ಒಳ್ಳೊಳ್ಳೆಯ ತಿಂಡಿ ತಿನಸು ಹಾಕುತ್ತೇವೆ. ಇದರಿಂದ ಅವುಗಳ ಕರುಗಳಿಗೂ ತೊಂದರೆಯಾಗುವುದಿಲ್ಲ ; ನಮಗೂ ಲಾಭವಾಗುವುದು. ಅಲ್ಲವೆ ?

ಶಂಕರ– ಸರಿ ಸರಿ ಹಾಗೆಯೇ ಮಾಡಬೇಕು. ನಮಗೂ ಲಾಭವಾಗಬೇಕು. ಅವಕ್ಕೂ ಲಾಭವಾಗಬೇಕು. ನಮ್ಮ ಹಾಗೆ




ಅಮ್ಮಾ, ಜೇನುತುಪ್ಪ ಬಹಳ ಸಿಹಿ, ಇನ್ನಷ್ಟು ತಿನ್ನುತ್ತೇನೆ.

ಅವೂ ಸುಖಪಡಬೇಕು. ಇನ್ನೊಂದು ವಿಚಾರ : ಅಣ್ಣ, ಜೇನುತುಪ್ಪ ಉತ್ಕೃಷ್ಟವಾದ ಆಹಾರವೆ ?

ಅಣ್ಣ– ಹೌದು ಬಲು ಉತ್ಕೃಷ್ಟವಾದ ಆಹಾರ. ಇದು ಬಹು ಬೇಗ ಜೀರ್ಣವಾಗುವುದು. ಆದುದರಿಂದಲೇ ಆಗತಾನೆ

ಹುಟ್ಟಿದ ಮಕ್ಕಳಿಗೂ ಇದನ್ನು ಸ್ವಲ್ಪ ನೆಕ್ಕಿಸುತ್ತಾರೆ. ಚಿಕ್ಕ ಮಕ್ಕಳಿಗೆ ಜೇನುತುಪ್ಪವೆಂದರೆ ಬಲು ಆಸೆ. ಸಕ್ಕರೆಯಲ್ಲೂ ಸಿಹಿ ಇದೆ. ಜೇನುತುಪ್ಪದಲ್ಲೂ ಸಿಹಿ ಇದೆ. ಆದರೆ ಸಕ್ಕರೆಯ ಸಿಹಿಗಿಂತ ಜೇನಿನ ಸಿಹಿ ಮೈಗೆ ಬಹಳ ಒಳ್ಳೆಯದು. ಕೆಮ್ಮು, ದಮ್ಮು, ನೆಗಡಿ ಮುಂತಾದ ರೋಗವುಳ್ಳವರು ಜೇನುತುಪ್ಪವನ್ನು ಸ್ವಲ್ಪ ಸ್ವಲ್ಪ ತಿಂದರೆ ಒಳ್ಳೆಯದೆಂದು ಹೇಳುತ್ತಾರೆ, ಎಷ್ಟೋ ಜನ ವೈದ್ಯರು ಕೆಲವು ಔಷಧಿಗಳನ್ನು "ಜೇನುತುಪ್ಪದಲ್ಲಿ ತೆಗೆದುಕೊಳ್ಳಿರಿ" ಎಂದು ಹೇಳುವುದುಂಟು. ಸುಟ್ಟ ಗಾಯಗಳಿಗೆ ಜೇನುತುಪ್ಪವನ್ನು ಹಚ್ಚುತ್ತಾರೆ. ದಿನಾಲು ಸ್ವಲ್ಪ ಸ್ವಲ್ಪ ತುಪ್ಪವನ್ನು ತಿನ್ನುತ್ತಾ ಬಂದರೆ ಒಳ್ಳೆಯ ಆರೋಗ್ಯಕರವೆನ್ನುತ್ತಾರೆ. ಅಂತು ಜೇನುತುಪ್ಪವು ಒಳ್ಳೆಯ ಆಹಾರವೂ ಹೌದು, ಒಳ್ಳೆಯ ಔಷಧವೂ ಹೌದು. ಜೇನುತುಪ್ಪದ ಹಾಗೆ ಇದರ ಮೇಣವೂ ಮನುಷ್ಯನಿಗೆ ಬಲು ಉಪಯೋಗಕರವಾದ ವಸ್ತು.

ಶಂಕರ– ಅಣ್ಣ, ಈ ದಿನ ಬಹು ಉಪಯುಕ್ತವಾದ ವಿಷಯ ತಿಳಿದಹಾಗಾಯಿತು. ಹೊತ್ತು ಬಹಳವಾಯಿತು. ಮನೆಗೆ ಹೋಗೋಣ ನಡೆ.

ಎಂದು ಶಂಕರನೆನ್ನಲು ಇಬ್ಬರೂ ಎದ್ದು ಮನೆಯಕಡೆ ಹೊರಟರು. ದಾರಿಯುದ್ದಕ್ಕೂ ಶಂಕರನ ಮನಸ್ಸಿನಲ್ಲಿ ಜೇನು ಹುಳುಗಳ ಶ್ರೇಷ್ಠವಾದ ಗುಣಗಳು ಸಂತೋಷಗೊಳಿಸುತ್ತಿದ್ದವು. ಅವುಗಳ ಸಹಕಾರ, ಒಗ್ಗಟ್ಟು, ತ್ಯಾಗ, ಪರೋಪಕಾರ, ಸತತ ಒಂದಿಲ್ಲೊಂದು ಕೆಲಸಮಾಡುವ ಗುಣ ಇವುಗಳನ್ನು

ಮನುಷ್ಯನೂ ಕಲಿಯ ಬೇಕಾದುದೆಂದುಕೊಂಡನು. ಮನೆಗೆ ಬಂದ ಮೇಲೆ ಜೇನಿನ ಜೀವನದ ಕಥೆಯನ್ನು ತಾಯಿಗೆ ಕಥೆಮಾಡಿ ಹೇಳಿದನು. ತಾನು ತನ್ನ ಟಿಪ್ಪಣಿಯ ಪುಸ್ತಕದಲ್ಲಿ ಬರೆದುಕೊಂಡು ಬಂದ ಮುಖ್ಯ ವಿಷಯಗಳನ್ನು ತಾಯಿಯೆದುರು ಓದಿ ಹೇಳಿದನು. ತಾಯಿಯು ಚಿಕ್ಕಮಗುವಿನ ಬುದ್ಧಿವಂತಿಕೆಗೆ ಮೆಚ್ಚಿಕೊಂಡಳು. ಮುಂದೆ ಜೇನಿನ ವಿಚಾರವಾಗಿ ಬರೆದಿರುವ ದೊಡ್ಡ ದೊಡ್ಡ ಪುಸ್ತಕಗಳನ್ನು ಓದಿ ಹಲವಾರು ವಿಷಯಗಳನ್ನು ತಿಳಿದುಕೊಂಡನು. ತಾನೂ ಜೇನು ಸಾಕಬೇಕೆಂದು ಯೋಚಿಸತೊಡಗಿದನು. ದೊಡ್ಡವನಾದ ಮೇಲೆ ಜೇನು ಸಾಕಿ ಬಹು ಲಾಭ ಪಡೆದನು.

ಜೈ ಹಿಂದ್

## ಈ ಪುಸ್ತಕದಲ್ಲಿ ಉಪಯೋಗಿಸಿರುವ ಕೆಲವು ವಿಶೇಷ ಶಬ್ದಗಳು

ಆಗಲ
ಅಂಗ
ಅಂಶ
ಅಬ್ಬಾ !
ಅಂಟು
ಅದ್ಭುತ
ಅರಸಿ
ಅರಿ
ಅನ್ಯೋನ್ಯ
ಅವಧಿ
ಅಂಕೆ
ಅರಳು
ಅನುಸರಿಸಿ
ಅನುಕೂಲ
ಅನಾನುಕೂಲ
ಅನಂತರ
ಅಮೃತ
ಆಸಕ್ತಿ
ಆರೋಗ್ಯಕರ
ಆಹಾರ
ಆಶ್ಚರ್ಯ
ಆಲ
ಆರೈಕೆ
ಆಯಾಸ
ಇಲಾಖೆ

ಉಪಯೋಗಿ
ಉಪಯುಕ್ತ
ಉದ್ಯೋಗ
ಉತ್ಕೃಷ್ಟ
ಎಚ್ಚರಿಕೆ
ಎಪಿಯರಿಸ್ಟ್
ಎಳೆ
ಎಣ್ಣೆ
ಒಡನಾಟ
ಒಗ್ಗಟ್ಟು
ಒತ್ತೊತ್ತಾಗಿ
ಔಷಧ
ಕಡೆಗೆ
ಕಲಸು
ಕಥೆ
ಕರ್ಮಯೋಗಿ
ಕಡಜ
ಕಣಜ
ಕಚ್ಚು
ಕಪೋಲ
ಕರು
ಕಲಿ
ಕವಿ
ಕಾರು
ಕ್ರಿಮಿ

ಕುತೂಹಲ
ಕುಡಿ
ಕುರಿತು
ಕುಂಡ
ಕುರಿ
ಕೆಮ್ಮು
ಕೆಲಸಗಾರ
ಕೇವಲ
ಕೊನೆ
ಕೊಠಡಿ
ಕೊಳವೆ
ಕ್ರಮ
ಕ್ರಮೇಣ
ಕೋಡುಗಲ್ಲು
ಕೋಲುಜೇನು
ಕೋಣೆ
ಖರ್ಜು
ಗಂಡ
ಗಳಿಗೆ
ಗಮನಿಸು
ಗ್ರಂಥಿ
ಗಾದೆ
ಗಾತ್ರ
ಗಾಯ
ಗುಂಪು

ಗೂಡು
ಗೆದ್ದಲು
ಗೋಡೆ
ಚಮತ್ಕಾರ
ಚರಿತ್ರೆ
ಚುರುಕು
ಚಿಟ್ಟೆ
ಚಿಟ್ಟೆಜೇನು
ಚೆಲುವು
ಜಕ್ಕಣಾಚಾರ್ಯ
ಜಗಳ
ಜಗತ್ತು
ಜಿಗಟು
ಜೀರ್ಣ
ಜೀವಮಾನ
ಜೀವಿ
ಜೇಡ
ಜೇಡನ ಬಲೆ
ಜೊಲ್ಲು
ಜೋಪಾನ
ಝೇಂಕಾರ
ಟಿಪ್ಪಣಿ
ತರ
ತರು (ಧಾತು)
ತಳಭಾಗ

ತಮಗೆ
ತಾಯಿಂಜೇನು
ತ್ಯಾಗ
ತ್ಯಾಗಿ
ತಿರುಗಿ
ತಿನ್ನು
ತಿನ್ನಿಸು
ತುಡುವೆ
ತೆರಪು
ತೆಳ್ಳನೆಯ
ತೊಡವಿ
ತೊಡಕು
ತೊಗರಿ
ತೊಂದರೆ
ದಪ್ಪ
ದಮ್ಮು
ದಾಡೆ
ದಾದಿ
ದಾಸ್ತಾನು
ದಿನಾಲು
ದುಂಬಿ
ದುರ್ಜನ
ದೇಶ
ದೇಹ
ಧೂಳಿ
ನಗರ
ನಸರಿ

ನಡುವೆ
ನಟ್ಟದೃಷ್ಟಿ
ನಾಡು
ನಾಚು
ನ್ಯಾಯ
ನಿಯಮ
ನಿದ್ರೆ
ನಿರ್ವಾಣ
ನಿಜ
ನಿಲ್ಲು
ನೋಡು
ಪಟ್ಟಣ
ಪಣತ
ಪದಾರ್ಥ
ಪದೇಪದೇ
ಪರಾಗ
ಪರೋಪಕಾರ
ಪಕ್ವ
ಪಕ್ಷಿ
ಪರಿಹಾರ
ಪ್ರಸಂಗ
ಪ್ರಯೋಜನ
ಪಾನ
ಪಾಲನೆ
ಪ್ರಾಣಿ
ಪ್ರಾರಂಭ
ಪುಷ್ಪಧೂಳಿ

ಪುಷ್ಪ
ಪೂರ್ಣ
ಪೆಳೆ
ಪೈರು
ಪೊದೆ
ಬಟ್ಟೆ
ಬಗೆ
ಬರು
ಬಂಡೆ
ಬಲಿಷ್ಠ
ಬಲಿತ
ಬಳಿ
ಬದಿ
ಬಲೆ
ಬೆಳವಣಿಗೆ
ಭಲೆ !
ಭಯ
ಭಕ್ತಿ
ಭಾಗ
ಭಾನುವಾರ
ಮುಗ್ಗಲು
ಮಕರಂದ
ಮಧ್ಯ
ಮರಿ
ಮಹಾ
ಮಿಾಸೆ
ಮುಖ್ಯ

ಮುಂತಾದ
ಮೆತ್ತಗೆ
ಮಳೆ
ಮೇಣ
ಮೇಲ್ಭಾಗ
ಮೊಟ್ಟೆ
ಯಂತ್ರ
ಯಜಮಾನಿಕೆ
ಯುದ್ಧ
ರಸ
ರಕ್ಷಣೆ
ರಾಣಿ
ರಾಜ್ಯ
ರೆಕ್ಕೆ
ರೈತ
ರೀತಿ
ರುಚಿ
ರೇಷ್ಮೆ
ಲಾಭ
ಲಾಲನೆ
ಲೀಲೆ
ಲೆಕ್ಕಾಚಾರ
ಲೆಕ್ಕಿಸು
ಲೋಕ
ವರ
ವಂಶ
ವಂಶಾಭಿವೃದ್ಧಿ

ವ್ಯವಸಾಯ
ವಾರ
ವಾಸ
ವಿಚಾರ
ವಿಚಿತ್ರ
ವಿಶ್ರಮಿಸು
ವಿಧೇಯ
ವಿವರಿಸು
ವೈರಿ
ಶಕ್ತಿ
ಶತ್ರು
ಶಾವಿಗೆ
ಶೌರ್ಯ
ಸಲ
ಸಪ್ಪಳ
ಸಣ್ಣ
ಸರಿ
ಸಂದು
ಸಂತೋಷ

ಸಜ್ಜನ
ಸಂಖ್ಯೆ
ಸಂತಾನ
ನಿತ್ಯ
ನೆಗಡಿ
ನೊಣ
ಸಂಗ್ರಹ
ಸಕ್ಕರೆ
ಸಹಕಾರ
ಸೃಷ್ಟಿ
ಸ್ವಲ್ಪ
ಸ್ವಚ್ಛ
ಸ್ವತಂತ್ರ
ಸ್ವಾತಂತ್ರ್ಯ
ಸಿಹಿ
ಸಿಟ್ಟು
ಬದುಕು
ಬಿರುಕು
ಬೆಳಸು

ಸಿಂಪಡಿಸು
ಸುಟ್ಟ
ಸುಗ್ಗಿ
ಸುಗಂಧ
ಸೂರ್ಯ
ಸೂರ್ಯಕಾಂತಿ
ಸುಂದರ
ಸೇರು
ಸೇತುವೆ
ಸೇವೆ
ರೊಟ್ಟಿ
ರೋಗ
ಲಕ್ಷ್ಯ
ಸೋರು
ಹನಿ
ಹಳ್ಳ
ಹರಳೆಣ್ಣೆ
ಹಗೇವು
ಹಲವು

ಹಚ್ಚಹಸಿರು
ಹಿಂಭಾಗ
ಹೀರು
ಹುತ್ತ
ಸಂಸಾರ
ಸಂಬಂಧ
ಸರ್ವಜ್ಞ
ಹುಟ್ಟು
ಹುಳು
ಹುಚ್ಚೆಳ್ಳು
ಹೂರಣ
ಹೆಜ್ಜೇನು
ಹೊರಗೆ
ಹೊಟ್ಟೆ
ಹೊತ್ತು
ಹೊರತು
ಹೌದು





ಮರದ ಮೇಲೆ ಜೇನುಗೂಡು
ಏನು ಸಂಘ ಜೀವನ !
ಮನುಜದೇಹಕಿದರ ತುಪ್ಪ
ಅಮರ ಸಂಜೀವನ !
ಮಧುರ ಸುಖದ ಭಾವನಾ

ಮುಳ್ಳನು ಕಂಡು ಹೆದರುವ ಬಾಲೆಗೆ
ಗುಲಾಬಿ ಹೂವೇಕೆ ?
ಕಡಿತದ ಭಯದಲಿ ಹೆದರುವ ಮನುಜಗೆ
ಜೇನುತುಪ್ಪವೇಕೆ ?



# ಗ್ರಂಥಕರ್ತರ ಇತರ ಪುಸ್ತಕಗಳು

೧. ತೆಂಗು (೪೦ ಚಿತ್ರಗಳ ಮಕ್ಕಳ ಪುಸ್ತಕ)
೨. ಸಾಲ ತೀರಿಸಿದ ನಾಯಿ (ಸಚಿತ್ರ ಮಕ್ಕಳ ಪುಸ್ತಕ)
೩. ಅರವಿಂದ (ಸಚಿತ್ರ ಮಕ್ಕಳ ಪುಸ್ತಕ)
೪. ಹೊಸಗನ್ನಡ ಸರಳ ವ್ಯಾಕರಣ ಪಾಠಗಳು
೫. ಸಿದ್ಧರಾಮನ ಅಖಂಡ ಸಾಕ್ಷಾತ್ಕಾರ
೬. ಬಸವಣ್ಣನವರ ಕ್ರಾಂತಿ ಕಹಳೆ
೭. ಬಸವಣ್ಣನವರ ಬೋಧೆ–ಪ್ರತಿಪಾದಿಸಿದ ಸಿದ್ಧಾಂತ
೮. ಅಜಗಣ್ಣ–ಮುಕ್ತಾಯಕ್ಕ
೯. ಬಸವಣ್ಣನವರ ಪಂಚಪರುಷ
೧೦. ತೋಂಟದ ಸಿದ್ಧಲಿಂಗೇಶ್ವರ ಮತ್ತು ಸಿದ್ಧಗಂಗಾಕ್ಷೇತ್ರ
೧೧. ಬಾಷ್ಪಾಂಜಲಿ ಪಂಚವಿಂಶತಿ
೧೨. ಮೂರು ರಗಳೆಗಳು (ಹರಿಹರ ಮಹಾಕವಿ)
೧೩. ಚನ್ನಮಲ್ಲಿಕಾರ್ಜುನ (ಸಂಸ್ಮರಣ ಗ್ರಂಥ)
೧೪. ಸಿದ್ಧಗಂಗಾಕ್ಷೇತ್ರದ ಇತಿಹಾಸ
೧೫. ಷಟ್‌ಸ್ಥಲವಲ್ಲಭ (ಸಂಪಾದಿತ–ಚಂಪೂ ಗ್ರಂಥ)
೧೬. ಸಿದ್ಧಗಂಗಾಶ್ರೀ (ಸಂಪಾದಿತ–ಮಹಾಸಂಪುಟ)
೧೭. ಅನುಭಾವಿ ಚನ್ನಮಲ್ಲಿಕಾರ್ಜುನ (ಕಿರಿಯರ ಆವೃತ್ತಿ)
೧೮. ಉದ್ದಾನ ಶಿವಯೋಗಿ
೧೯. ರಾಜಶೇಖರವಿಳಾಸ (ಗದ್ಯಾನುವಾದ)
೨೦. ವೃಷಭೇಂದ್ರವಿಜಯ (ಗದ್ಯಾನುವಾದ)
(ಬಸವರಾಜ ವಿಜಯ)
೨೧. ಕನಕದಾಸ (ಭಾರತ ಸರಕರಾದ ಪ್ರಕಟನೆ)
೨೨. ಕನಕದಾಸ (ಹಿಂದಿ ಆವೃತ್ತಿ) ( – ,, – )

( ಇತರ ನೂರಾರು ಪ್ರೌಢ ಲೇಖನಗಳು )